# ಶ್ರೀಬೃಹತೀಸಹಸ್ರಶಸ್ತ್ರಮ್

ಹೋಮಕ್ರಮ ಸಹಿತಂ




ಸಂಗ್ರಹ ಮತ್ತು ಸಂಪಾದನೆ

**ಡಾ|| ಚತುರ್ವೇದಿ ವಿದ್ವಾನ್ ಎಸ್. ವೇದವ್ಯಾಸಾಚಾರ್ಯ**



**ಪ್ರಕಾಶನ: ಚತುರ್ವೇದಿ ಸೇವಾ ಟ್ರಸ್ಟ್**

# ಶ್ರೀ ಬೃಹತೀ ಸಹಸ್ರಶಸ್ತ್ರಮ್

(ಹೋಮಕ್ರಮ ಸಹಿತಮ್)

ಸಂಗ್ರಹ-ಸಂಪಾದನೆ :

**ಡಾ ॥ ಚತುರ್ವೇದಿ ವಿದ್ವಾನ್ ಎಸ್. ವೇದವ್ಯಾಸಾಚಾರ್ಯ,**

ಎಂ. ಎ., ಬಿ.ಎಡ್., ಪಿಹೆಚ್‌ಡಿ

ಪ್ರಕಾಶನ :

**ಚತುರ್ವೇದಿ ಸೇವಾ ಟ್ರಸ್ಟ್**

184, 22ನೇ ಮುಖ್ಯ ರಸ್ತೆ,

12ನೇ 'ಎ' ಅಡ್ಡ ರಸ್ತೆ, ರಾಘವೇಂದ್ರ ಲೇ ಔಟ್, ಪದ್ಮನಾಭನಗರ

ಬೆಂಗಳೂರು - 70. ಫೋನ್ : 080-2639 3950, 94493 13797

# ಒಳಪುಟಗಳಲ್ಲಿ

* * * * * *

# ಅನುಗ್ರಹ ವಚನ - 1



*ಶ್ರೀ ಶ್ರೀ 108 ಶ್ರೀ ವಿಶ್ವೇಶತೀರ್ಥರು*
ಪೇಜಾವರ ಅಧೋಕ್ಷಜ ಮಠ
ಉಡುಪಿ
ದಕ್ಷಿಣ ಕನ್ನಡ

ಬೃಹತೀ ಸಹಸ್ರವು ಒಂದು ಶಸ್ತ್ರಮಂತ್ರವಾಗಿದೆ. ಇದು ಭಗವಂತ ಹಾಗೂ ವಾಯುದೇವರಿಗೆ ಅನ್ನವೆನಿಸಿದೆ. ಇಂದ್ರ ದೇವರು ವೃತ್ರನನ್ನು ಸಂಹರಿಸಿ ಮಹಾವ್ರತವೆಂಬ ಯಾಗವನ್ನಾಚರಿಸಿ ಮಹೇಂದ್ರರೆನಿಸಿದರು.

ಇದರಲ್ಲಿ ವಿಶ್ವಾಮಿತ್ರರು ಬೃಹತಿ ಸಹಸ್ರವನ್ನು ಮೂರು ಬಾರಿ ಪ್ರಶಂಸಿಸಿ ಭಗವಂತನ ಸಾಲೋಕ್ಯ, ಸಾಮೀಪ್ಯ ಭಗವಂತನ ಧಾಮವನ್ನು ಪಡೆದರು. ಇದು ಮೂವತ್ತಾರು ಸಾವಿರ ಅಕ್ಷರಗಳಿಂದ ಕೂಡಿದ್ದು 36,000 ಸ್ವರ ಹಾಗೂ 36,000 ವ್ಯಂಜನಗಳಿಂದ ಪ್ರತಿಪಾದ್ಯವಾದ 27,000 ನಾಡಿಗಳಲ್ಲಿರುವ 72,000 ರೂಪಗಳನ್ನು ಪ್ರತಿಪಾದಿಸುತ್ತದೆ. ಇದು ಶ್ರೀಮದಾಚಾರ್ಯರಿಗೆ ಅತ್ಯಂ ಸಂತೋಷವುಂಟಾಗುವ ಗ್ರಂಥವೆನಿಸಿದೆ.

ಇಂತಹ ಗ್ರಂಥವನ್ನು ನಮ್ಮ ಶಿಷ್ಯರಾದ ಶ್ರೀ ಚತುರ್ವೇದಿ ವೇದವ್ಯಾಸಾಚಾರ್ಯರು ಹೋಮಕ್ರಮ ಸಹಿತವಾಗಿ ಸಂಗ್ರಹ ಮಾಡಿರುವುದು ನಮಗೆ ಸಂತಸವಾಗಿದೆ. ಇವರು ನಮ್ಮ ವಿದ್ಯಾಪೀಠದಲ್ಲಿ ಹನ್ನೆರಡು ವರ್ಷ ಅಧ್ಯಯನ ಮಾಡಿ, ನಮ್ಮಲ್ಲಿ ಸುಧಾಂತ ಅಧ್ಯಯನವನ್ನು ಮಾಡಿ ನಮಗೆ ಅತಿಪ್ರಿಯ ಶಿಷ್ಯರಾಗಿರುವರು. ಇವರು ಈ ಗ್ರಂಥವನ್ನಲ್ಲದೆ ದೀಪ, ನಮಸ್ಕಾರ, ದೇವಪೂಜೆ, ಸಂಧ್ಯಾವಂದನೆ, ಭೋಜನ ಪದ್ಧತಿ ಮೊದಲಾದ ಅತ್ಯುಪಯುಕ್ತಗಳಾದ ಪುಸ್ತಕಗಳನ್ನು ಬರೆದು ಪ್ರಕಾಶನವನ್ನು ಮಾಡಿರುವರು. ಈಗ ಮತ್ತೊಂದು ಬೃಹತೀ ಸಹಸ್ರವನ್ನು ಕನ್ನಡದಲ್ಲಿ ಪ್ರಕಾಶನ ಮಾಡಿ ಮಾಧ್ವ ಜನಾಂಗಕ್ಕೆ ಮಹದುಪಕಾರ ಮಾಡಿದ್ದಾರೆ. ಈ ಬೃಹತೀ ಸಹಸ್ರವನ್ನು ಪ್ರತಿ ಮಾಧ್ವನೂ ಓದಲೇಬೇಕಾಗಿರುವ ಗ್ರಂಥವಾಗಿದೆ. ಇದನ್ನು ಅವರೇ ಪ್ರತಿಯೊಂದು ಸ್ಥಳಗಳಿಗೆ ಹೋಗಿ ಉಪದೇಶ ಕೊಡುವ ಕಾರ್ಯವನ್ನು ಹಮ್ಮಿಕೊಂಡಿರುವುದು ಇನ್ನೂ ಸಂತೋಷದ ವಿಷಯವಾಗಿದೆ.

ಮನೆಯಲ್ಲಿ ಪಾಠ, ಪ್ರವಚನ, ಗ್ರಂಥ ಪ್ರಕಾಶನ ಮೊದಲಾದವುಗಳಿಂದ ತಮ್ಮನ್ನು ಸಮಾಜಕ್ಕೆ ಅರ್ಪಿಸಿಕೊಂಡಿರುವ ವೇದವ್ಯಾಸಾಚಾರ್ಯರಿಗೆ ನಮ್ಮ ಪೂರ್ಣ ಆಶೀರ್ವಾದದ ಜೊತೆಗೆ ಮುಂದೆಯೂ ಇಂತಹ ಅನೇಕ ಗ್ರಂಥಗಳನ್ನು ಬರೆದು ಪ್ರಕಟಣೆಯನ್ನು ಮಾಡುವಂತೆ ಭಗವಂತನು ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆ.

ಇತಿ ನಾರಾಯಣ ಸ್ಮರಣೆಗಳು

*ಶ್ರೀ 108 ಶ್ರೀ ವಿಶ್ವೇಶತೀರ್ಥ ಶ್ರೀಪಾದಾಃ*

ಮೊಕ್ಕಾಂ - ಮೈಸೂರು

# ಅನುಗ್ರಹ ವಚನ – 2



*ಶ್ರೀ ಶ್ರೀ 108 ಶ್ರೀ ವಿಜ್ಞಾನನಿಧಿತೀರ್ಥ*
*ಶ್ರೀಪಾದಂಗಳವರು*
ಶ್ರೀಪಾದರಾಜ ಮಠ
ಮುಳಬಾಗಲು

ಬೃಹತೀ ಸಹಸ್ರವು, ಭಗವಂತನು ನೀಡಿದ ಅತ್ಯಮೂಲ್ಯ ಸಂಪತ್ತಾಗಿದೆ. ಗಾಯತ್ರೀದ್ರಷ್ಟೃಗಳಾದ ವಿಶ್ವಾಮಿತ್ರ ಮಹರ್ಷಿಗಳು ಈ ಶ್ರೇಷ್ಠ ಕೊಡುಗೆಯನ್ನು ನೀಡಿದ್ದಾರೆ. ಬೃಹತೀ ಸಹಸ್ರಮಂತ್ರಗಳು ಋಗ್ವೇದದಸಾರ ಭೂತವಾದದ್ದು. ವಿಶ್ವಾಮಿತ್ರ ಗಾಯತ್ರಿ ಹಾಗೂ ಬೃಹತೀಸಹಸ್ರವನ್ನು, ಜಗತ್ತಿಗೆ ನೀಡಿ 'ವಿಶ್ವಸ್ಯ ಮಿತ್ರಂ' ಜಗತ್ತಿಗೆ ಮಹೋಪಕಾರಿಗಳು ಎಂಬ ಸಾರ್ಥಕ ನಾಮರಾಗಿರುತ್ತಾರೆ.

ಐತರೇಯ ಉಪನಿಷತ್ತಿನಲ್ಲಿ ತಿಳಿಸಿದಂತೆ ಋಗ್ವೇದದ ಈ ಮಂತ್ರವನ್ನು ವಿಶ್ವಾಮಿತ್ರರು ಭಕ್ತಿಭಾವದಿಂದ ಮೂರು ಬಾರಿ ಶ್ರೀಮನ್ನಾರಾಯಣನ ಸಮ್ಮುಖದಲ್ಲಿ ಪಠಿಸಿ ಸಂತೋಷಪಡಿಸಿ, ವಿಶೇಷ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ವಿಶ್ವಾಮಿತ್ರ ಎಂಬ ಪದವು ಸೂಚಿಸುವಂತೆ ಪ್ರಪಂಚಕ್ಕೆ ಶ್ರೇಯೋಭಿಲಾಷಿಯಾದವರು.

*ಅನ್ನನಿಗೂ ಅನ್ನ –*

ಈ ಬೃಹತೀಸಹಸ್ರವು ಪರಮಾತ್ಮನಿಗೆ ಅನ್ನ, ವಿಶ್ವಾಮಿತ್ರ ಋಷಿಗಳು ಭಕ್ತಿಪರವಶದಿಂದ ಅರ್ಪಿಸಿದ ಅನ್ನರೂಪವಾದ ಈ ಬೃಹತೀಸಹಸ್ರಮಂತ್ರಗಳನ್ನು, ನಾರಾಯಣನು ಅಮೃತಸದೃಶವಾದ ಅನ್ನವೆಂದು ಸ್ವೀಕರಿಸಿದರು.

ಬೃಹತಿಸಹಸ್ರವನ್ನು ಕೇಳಿಸಿಕೋಂಡು ವಾಯುಸಹಿತರಾದ ಕೇಶವನು ಸಂತೋಷಗೊಂಡು ಎರಡನೇ ಅವರ್ತಿಹೇಳು ಎಂದು ಹೇಳಿದನು, ಇಂದ್ರದೇವರಲ್ಲಿ ಅವಿಷ್ಟರಾದ ವಿಶ್ವಾಮಿತ್ರರು ಮತ್ತೆ ಹೇಳಿದರು. ಅತ್ಯಂತ ಪ್ರೀತನಾದ ಭಗವಂತ ಮತ್ತೆ ಹೇಳಿ ಎಂದು ಹೇಳಿದನು. ಮೂರನೇ ಆವರ್ತಿಯೂ ಹೇಳಿದರು, ಇಷ್ಟು ಪ್ರೀತಿಯಿಂದ ಕೇಳಿಸಕೊಂಡಿದ್ದಕ್ಕೆ ಈ ಬೃಹತೀಸಹಸ್ರಕ್ಕೆ ಪರಮಾತ್ಮನ ಅನ್ನವೆಂದು ಕರೆಯುತ್ತಾರೆ.

**ತತ್ ಶ್ರುತ್ವಾ ಋಷಿಮಗಮತ್ ಕೇಶವೋ ವಾಯುಸಂಯುತಃ ।**
**ದ್ವಿತೀಯವಾರಂ ಶಂಸ ಇತಿಪ್ರಾಹ ತಂ ಚ ಜನಾರ್ದನಃ ॥**
**ತ್ರಿಃಶ್ರುತ್ಯೈವ ಶಕ್ರಮಾವಿಷ್ಟೋ ವಿಶ್ವಾಮಿತ್ರಃ ಶಶಂಸ ತತ್ ।**
**ಅತಿಪ್ರಿಯತ್ವಾದ್ ಭಗವಾನ್ ಪುನರಪಿ ಆಹ ಕೌಶಿಕಂ ।**
**ತೃತೀಯಂ ಚ ಶಶಂಸಾಸೌ, ವಿಷ್ಣೋಃ ಅನ್ನಂ ಪ್ರಕಲ್ಪಯತ್ ॥**

–ಐತರೇಯ ಭಾಷ್ಯ (2-2-3)

ವೇದದಲ್ಲಿ ಮಂತ್ರ ಉಚ್ಚಾರಣೆಯ ಕ್ರಮವನ್ನು ಛಂದಸ್ಸೆಂದೂ ಕರೆಯುವರು. ಇವು ವೇದದ ಅತಿಮುಖ್ಯವಾದ ಅಂಶ ಮತ್ತು ವೇದಕ್ಕೆ ಸುಶ್ರಾವ್ಯತ್ವವನ್ನು ತಂದು ಕೊಡುತ್ತದೆ. 24 ಅಕ್ಷರಗಳಿಂದ ಕೂಡಿದ್ದುದು ಗಾಯತ್ರಿ ಛಂದಸ್ಸೆಂದು, 36 ಅಕ್ಷರದ್ದು ಬೃಹತಿ ಛಂದಸ್ಸೆಂದು ಕರೆಯುವರು. ಪ್ರತಿಯೊಂದು ಬೃಹತಿ ಮಂತ್ರಗಳು 36 ಅಕ್ಷರಗಳಿಂದ ಕೂಡಿರುತ್ತದೆ. ವಿಶ್ವಾಮಿತ್ರರು 1000 ಮಂತ್ರ ಅಥವಾ ಋಕ್‌ಗಳನ್ನು ಪಠಿಸಿರುವರು.

ಪ್ರತಿಯೊಂದು ಬೃಹತಿ ಋಕ್‌ಗಳು ಪರಮಾತ್ಮನ ವೈಭವವನ್ನು ತಿಳಿಸುತ್ತವೆ. ಬೃಹತಿ ಸಹಸ್ರದ ಮಂತ್ರಗಳು ವಿಶ್ವರೂಪ ಭಗವಂತನನ್ನು ಹೇಳುತ್ತವೆ ಮತ್ತು ವಿಷ್ಣು ಸಹಸ್ರನಾಮದ ಮೊದಲನೆಯ ಮಂತ್ರವಾದ ವಿಶ್ವದಿಂದ ಕೊನೆಯದಾದ ಸರ್ವಪ್ರಹರಣಾಯುಧದವರೆಗೆ ವಿಶೇಷವಾಗಿ ವರ್ಣಿಸಲ್ಪಟ್ಟಿದೆ.

## *1.* ಉಕ್ಥಾಯ *:*

ವಿಷ್ಣುವೇ ಬೃಹತೀಸಹಸ್ರ ಪ್ರತಿಪಾದ್ಯ – ವಿಶ್ವಾಮಿತ್ರನು ಬೃಹತೀಸಹಸ್ರವನ್ನು ಪಠಿಸಿದನು. ಅದರಿಂದ ಇಂದ್ರನ ಲೋಕವನ್ನು ಹೊಂದಿದನು ಎಂಬಲ್ಲಿ ಬೃಹತೀಸಹಸ್ರದಿಂದ ಇಂದ್ರಲೋಕವೇ ಪ್ರಾಪ್ಯವೆಂದಿದೆ. ಬೃಹತೀಸಹಸ್ರವೇ ಉಕ್ಥ. ಅದರಿಂದ ಪ್ರಾಪ್ತನಾದವನೇ ಉಕ್ಥಾಯು. ಈ ಉಕ್ಥಾಯು ಎಂಬ ಹೆಸರು ವಿಷ್ಣುವಿನಲ್ಲಿಯೇ ಪ್ರಸಿದ್ಧ. ಆದ್ದರಿಂದ, ಇಲ್ಲಿ ಇಂದ್ರ ಶಬ್ಧದಿಂದ ವಿಷ್ಣುವೇ ಉಕ್ತನಾಗಿದ್ದಾನೆ ಎಂದು ಸಿದ್ಧವಾಗುತ್ತದೆ. ಬೃಹತೀಸಹಸ್ರವೇ ಮುಖ್ಯವಾಗಿ ಉಕ್ಥ ಎನಿಸುತ್ತದೆ. ಹರಿಗೆ ಪ್ರಿಯವಾದ ಬೃಹತೀ ಸಹಸ್ರವೇ ಮಹಾವ್ರತಯಾಗದಲ್ಲಿ ಅಂಗವಾಗಿ ಪಠಿಸಲ್ಪಟ್ಟಾಗ ಉಕ್ಥವೆನಿಸುತ್ತದೆ. ಇದರಿಂದ ಪ್ರಾಪ್ಯನಾದವನು ಹರಿಯೇ. ಆದ್ದರಿಂದ ಹರಿಯು ಉಕ್ಥಾಯು ಎನಿಸಿದ್ದಾನೆ. ಐಶ್ವರ್ಯವುಳ್ಳ ಪ್ರಯುಕ್ತವಾಗಿ ಇಂದ್ರನು ಎನಿಸಿದ್ದಾನೆ. ಆದ್ದರಿಂದ ಉಕ್ಥಾಯು ಇಂದ್ರ ಎಂದು ವಿಷ್ಣು ಯಜ್ಞಗಳಲ್ಲಿ ಆರಾಧಿಸಲ್ಪಡುತ್ತಾನೆ ಎಂದು ಗರುಡಪುರಾಣದಲ್ಲಿ ಹೇಳಿದೆ. ಯಜ್ಞಗಳಲ್ಲಿ

ಅನೇಕ ಕಡೆ ಒಂದೇ ಪ್ರಕರಣದಲ್ಲಿ ವಿಷ್ಣುವು ಉಕ್ಥಾಯು, ಇಂದ್ರ ಎಂದು ಕರೆಯಲ್ಪಡುತ್ತಾನೆ ಮತ್ತು ಇನ್ನೊಬ್ಬ ಇಂದ್ರನು ಪ್ರತ್ಯೇಕವಾಗಿ ಉಕ್ಥಾಯು ಎಂಬ ವಿಶೇಷಣವಿಲ್ಲದೆ ಕೇವಲ ಇಂದ್ರಶಬ್ಧದಿಂದ ಕರೆಯಲ್ಪಡುತ್ತಾನೆ.

## 2. *ಸರ್ವಶಬ್ಧವಾಚ್ಯ ವಿಷ್ಣುಃ*

ಯಾರನ್ನು ಇಂದ್ರರೆನ್ನುವರೋ, ಯಾರನ್ನು ವರುಣರೆನ್ನುವರೋ, ಯಾರನ್ನು, ಯಾರನ್ನು ಮಿತ್ರನೆನ್ನುವರೋ, ಯಾರನ್ನು ಸತ್ಯವೆನ್ನುವರೋ, ಎಂದು ಹೇಳಿ ತಪಸ್ಸಿಗೆ ಮಾತ್ರ ಮೈದೋರುವ, ದೇವತೆಗಳಿಗೂ, ದೇವೋತ್ತಮನಾದ ಪರಮಾತ್ಮನಿಗೂ ಆ ಇಂದ್ರಾದಿದೇವತೆಗಳಿಗೂ, ಔಷಧಿ ದ್ರವ್ಯವೇ, ನಿನ್ನನ್ನು ಹೋಮಿಸುತ್ತೇನೆ. ವಿಷ್ಣುವಿಗೂ, ಇಂದ್ರಾದಿಗಳಿಗೂ ಭೇದವನ್ನು ಹೇಳುವುದರಿಂದಲೂ ಪ್ರಕೃತದಲ್ಲಿ ಇಂದ್ರ ಎಂದರೆ ಪ್ರಸಿದ್ಧ ಇಂದ್ರನಲ್ಲ ವಿಷ್ಣುವೇ.

## 3. *ಬೃಹತೀಸಹಸ್ರದ ಅಭಿಮಾನಿ ಹಾಗೂ ಪ್ರತಿಪಾದ್ಯ ದೇವತೆಗಳು :*

ಬೃಹತೀ ಛಂದಸ್ಸಿನ ಸಾವಿರ ಋಕ್ಕುಗಳು ಸಿಗದಿರುವುದರಿಂದ ಆ ಛಂದಸ್ಸೇ ಆಗಬೇಕೆಂಬ ನಿಯಮ ತೊರೆದು ಯಾವುದೇ ಛಂದಸ್ಸಿನ ಋಕ್ಕುಗಳನ್ನು ಸೇರಿಸಿದಾಗ ಒಟ್ಟು ಮೂವತ್ತಾರು ಸಾವಿರ ಅಕ್ಷರಗಳಾವುವೋ ಅಷ್ಟು ಋಕ್ಕುಗಳನ್ನು ಸೇರಿಸಿದರೆ ಬೃಹತೀಸಹಸ್ರ ಸಿದ್ಧವಾಗುವುದು. ಎಲ್ಲ ಜೀವಿಗಳ ಶರೀರಗಳಿಗೆ ಅಭಿಮಾನಿಯಾದ ಸ್ವಾಯಂಭುವ ಮನುವೇ ಬೃಹತೀಸಹಸ್ರದ ವ್ಯಂಜನಾಕ್ಷರಗಳಿಗೂ ಅಭಿಮಾನಿ. ಎಲ್ಲ ಜೀವಾತ್ಮರಿಗೆ ಅಭಿಮಾನಿಯಾದ ಚತುರ್ಮುಖನು ಘೋಷಾಕ್ಷರಗಳಿಗೂ ಅಭಿಮಾನಿ. ಎಲ್ಲ ಅಕ್ಷರಗಳಿಗೂ ಪ್ರತಿಪಾದ್ಯದೇವತೆ ವಿಷ್ಣುವೇ. ಹೀಗೆ ಅಭಿಮಾನಿ ದೇವತೆ. ಪ್ರತಿಪಾದ್ಯ ದೇವತೆಗಳನ್ನು ತಿಳಿದು ಉಪಾಸನೆ ಮಾಡಿದ ವಸಿಷ್ಠಮುನಿ, ವಾಸ ಮಾಡುವವರಲ್ಲಿ ಉತ್ತಮನೆನಿಸಿ, ವಸಿಷ್ಠ ಎಂಬ ಹೆಸರು ಪಡೆದನು. ಈ ರಹಸ್ಯವನ್ನು ಇಂದ್ರನು ವಿಶ್ವಾಮಿತ್ರನಿಗೆ ಮತ್ತು ಭರದ್ವಾಜನಿಗೂ ಉಪದೇಶಿಸಿದನು. ಈ ರಹಸ್ಯವಿದ್ಯೆಯನ್ನು ಹೀಗೆ ಅನೇಕ ಯೋಗ್ಯ ಶಿಷ್ಯರಿಗೆ ಉಪದೇಶಿಸಿದುದರಿಂದಲೇ ಇಂದ್ರನು. ತಾನು ತಿಳಿದ ಬಂಧುವಾದ ವಿಷ್ಣುವಿನ ಅನುಗ್ರಹದಿಂದ ಯಜ್ಞಗಳಲ್ಲೆಲ್ಲ ಹವಿಸ್ಸನ್ನು ಸ್ವೀಕರಿಸಲು ಆಹ್ವಾನಿಸಲ್ಪಡುತ್ತಾನೆ.

ಘೋಷಾಕ್ಷರಗಳಿಗೆ ಚತುರ್ಮುಖನು ವಿಶೇಷವಾಗಿ ಅಭಿಮಾನಿ, ಸ್ವರಾಕ್ಷರಗಳಿಗೂ ಅವನೇ ಅಭಿಮಾನಿ. ಏಕೆಂದರೆ, ಎಲ್ಲ ಸ್ವರಾಕ್ಷರಗಳೂ, ಕ, ಚ, ಟ, ತ, ಪ, ವರ್ಗಗಳ ತೃತೀಯ, ಚತುರ್ಥ, ಪಂಚಮಾಕ್ಷರಗಳೂ,

ಯ. ವ. ರ. ಲ ಹಗಳೂ ಘೋಷಾಕ್ಷರಳೆನಿಸುತ್ತವೆ. ಊಷ್ಮಾಕ್ಷರಗಳಿಗೆ ಮುಖ್ಯ ಪ್ರಾಣ ಅಭಿಮಾನಿ. ವಿಶೇಷವಾಗಿ ಉಷ್ಮಾಕ್ಷರಗಳೆಂದರೆ ಶ. ಷ. ಸ. ಹ ಗಳು. ಹೀಗೆ ಬ್ರಹ್ಮವಾಯುಗಳೇ ಸ್ವರ-ವ್ಯಂಜನಾಕ್ಷರಗಳಿಗೆ ಮುಖ್ಯಾಭಿಮಾನಿಗಳೂ.

## 4. *ಇಂದ್ರನು ಬೃಹತೀಸಹಸ್ರೋಪಾಸಕ :*

ಸ್ವಾಯಂಭುವಮನುವು ವ್ಯಂಜನಗಳಿಗೂ ಶರೀರಕ್ಕೂ ಅಭಿಮಾನಿ. ಘೋಷಗಳಿಗೂ ಸರ್ವಜೀವರಿಗೂ ಅಭಿಮಾನಿ ಚತುರ್ಮುಖ. ಊಷ್ಮಾಭಿಮಾನಿ ವಾಯು. ಈ ಎಲ್ಲ ಅಕ್ಷರಗಳಲ್ಲಿಯೂ ಪ್ರತಿಪಾದ್ಯ ಜನಾರ್ದನ. ಈ ಮನು ಮುಂತಾದ ಅಭಿಮಾನಿ ದೇವತೆಗಳೆಲ್ಲರಿಗೂ ಅಧಿಪತಿ ಎಂದೂ. ಬೃಹತೀಸಹಸ್ರ ಮಂತ್ರದ ಪ್ರತಿಪಾದ್ಯ ದೇವತೆ ಎಂದೂ ವಿಷ್ಣುವನ್ನು ಉಪಾಸನೆ ಮಾಡಿದ ವಸಿಷ್ಠನು ಉಪಾಸನೆ ಮಾಡಿದ ಈ ವಿದ್ಯೆಯನ್ನೇ ಇಂದ್ರನು ವಿಶ್ವಾಮಿತ್ರನಿಗೂ, ಭರದ್ವಾಜನಿಗೂ ಉಪದೇಶಿಸಿದನು.

## 5. *ಬೃಹತೀಸಹಸ್ರದಲ್ಲಿ ಎಪ್ಪತ್ತೆರಡು ಸಾವಿರ ಭಗವದ್ರೂಪಗಳು :*

ಬೃಹತೀ ಸಹಸ್ರದ ಪ್ರತಿ ಋಚೆಯಲ್ಲಿ ಮೂವತ್ತಾರು ವ್ಯಂಜನ ಮೂವತ್ತಾರು ಸ್ವರಗಳು ಇರುತ್ತವೆ ಪ್ರತಿ ವ್ಯಂಜನ. ಸ್ವರಗಳಲ್ಲಿ ವಿಷ್ಣುರೂಪಗಳು ಇರುತ್ತವೆ. ವ್ಯಂಜನದಲ್ಲಿರುವ ವಿಷ್ಣುರೂಪವು ರಾತ್ರಿಗೂ ಸ್ವರದಲ್ಲಿರುವ ವಿಷ್ಣುರೂಪವು ಹಗಲಿಗೂ ಅಧಿದೇವತೆಗಳಾಗಿರುತ್ತವೆ. ಪ್ರತಿಯೊಂದು ಋಕ್ಕಿನ ಮೂವತ್ತಾರು ವ್ಯಂಜನಗಳು ಸಾವಿರ ಋಕ್‌ಗಳು ಸಾವಿರ ವಿಷ್ಣುರೂಪಗಳಾಗಿ ವಿಭಾಗ ಹೊಂದಿ ಮೂವತ್ತಾರು ಸಾವಿರ ರೂಪಗಳಾಗಿ ನೂರು ವರ್ಷದ (ಮೂವತ್ತಾರು ಸಾವಿರ) ರಾತ್ರಿಗಳಲ್ಲಿ ಅದೇ ವಿಷ್ಣುರೂಪ ಅಧಿ ದೇವತೆಯಾಗುತ್ತದೆ. ಅಂತೆಯೇ ಸ್ವರದಲ್ಲಿನ ವಿಷ್ಣುರೂಪಗಳು 72 ಸಾವಿರ ವಿಷ್ಣುರೂಪಗಳು ಹಗಲು ರಾತ್ರಿಗಳಿಗೆ ಅಧಿದೇವತೆಗಳು. ಬೃಹತೀಸಹಸ್ರದ ವರ್ಣಗಳಿಗೂ ಅದೇ ಅಧಿದೇವತೆಗಳೆಂದು ಧ್ಯಾನಿಸಿದರೆ ನೂರು ವರ್ಷ ಹರಿಧ್ಯಾನದ ಫಲವನ್ನು ಹೊಂದಬಹುದು.

## 6. *ಬೃಹತೀಸಹಸ್ರ – ಶರೀರನಾಡಿ–ಹಗಲು–ರಾತ್ರಿಗಳಲ್ಲಿ ಭಗವಂತ :*

ಬೃಹತೀ ಸಹಸ್ರ ಪಠಿಸುವವನ ದೇಹದಲ್ಲಿಯೂ ಮೇಲೆ ಹೇಳಿದಂತೆ 72 ಸಾವಿರ ವಿಷ್ಣುರೂಪಗಳು ಬೃಹತಿಸಹಸ್ರದಂತೆಯೇ ಇರುತ್ತದೆ. ಅದೇ ರೂಪಗಳೇ ರಾತ್ರಿಗಳ ನಿಯಮಾಕನಾದ ಸೂರ್ಯನಲ್ಲಿಯೂ ಇರುತ್ತವೆ. ಜೀವರೊಳಗಿದ್ದು ಅವರನ್ನು ಬಿಟ್ಟಿರಲಾರದೆ ಹಂನಾಮಕನಾಗಿ

ಸೂರ್ಯನಲ್ಲಿದ್ದು ನಾರಾಯಣನೆನಿಸಿಕೊಳ್ಳುತ್ತಾನೆ. ಸೂರ್ಯನಲ್ಲಿರುವ ವಿಷ್ಣುವು ಸೂರ್ಯಾಧಿ ದೇವತೆಗಳನ್ನು ಬಿಟ್ಟಿರುವುದಿಲ್ಲವಾದ್ದರಿಂದ ಅಹಂ ಎಂದು ಕರೆಯಿಸಿಕೊಳ್ಳುತ್ತಾನೆ. ಮನುಷ್ಯ ಜೀವರಲ್ಲಿ ಮತ್ತು ಸೂರ್ಯಾದಿಗಳಲ್ಲಿ ಇರುವವನು ಸರ್ವೋತ್ತಮನೊಬ್ಬನೆ. ಅದ್ದರಿಂದ ನಾರಾಯಣನೆ ಸೂರ್ಯಾದಿಗಳಲ್ಲಿಯೂ ಮತ್ತು ಜೀವರಲ್ಲಿಯೂ ಇರುವವನು ಮತ್ತು ಜೀವ ನಿಯಾಮಕರಾದ ಬ್ರಹ್ಮಾದಿಗಳಿಗೂ ನಿಯಾಮಕನೆಂದು ತಿಳಿಯಬೇಕು ಎಂದು ಐತರೇಯ ಸಂಹಿತೆಯಲ್ಲಿ ತಿಳಿಸಲಾಗಿದೆ.

ಎಪ್ಪತ್ತೆರಡು ಸಾವಿರ ವಿಷ್ಣು ರೂಪಗಳನ್ನು ಉಪಾಸನೆ ಮಾಡುವುದರಿಂದ ವಿಷ್ಣು ಸರ್ವೋತ್ತಮತ್ವ ಪುನಃ ಪುನಃ ಹೆಚ್ಚು ತಿಳಿದು ಬರುತ್ತದೆ. ಆದ್ದರಿಂದ ಕೇಶವನವರೆಗಿನ ದೇವತೆಗಳನ್ನು ಕ್ರಮವಾಗಿ ಹೊಂದುತ್ತಾನೆ. ಈ ಉಪಾಸನೆ ಮಾಡಲು ದೇವತೆಗಳೂ ಋಷಿಗಳೂ ಅರ್ಹರು – ಎಂದು ಮುಂತಾಗಿ ಸತ್ತತ್ವರಲ್ಲಿ ಹೇಳಿದೆ.

### *7. ಬೃಹತೀಸಹಸ್ರದಲ್ಲಿ ಪಂಚರೂಪಿಭಗವಂತನ ಉಪಾಸನೆ :*

ಗುಣಪೂರ್ಣನಾದ ಹರಿಯು ಉಕ್ಥನಾಮಕನಾಗಿ ನಾರಾಯಣಾದಿ ಐದು ರೂಪಗಳಿಂದು ಐದು ಭಾಗಗಳುಳ್ಳ ಬೃಹತೀಸಹಸ್ರವೆಂಬ ಉಕ್ಥದಲ್ಲಿರುವ ಬಗೆಯನ್ನು ಯಾರು ತಿಳಿಯುವನೋ, ಅವನು ಸರಿಯಾದ ತಿಳುವಳಿಕೆ ಉಳ್ಳವನು. ಈ ಎಲ್ಲ ಜಗತ್ತೂ ಆ ಹರಿಯಿಂದಲೇ ಹುಟ್ಟುವುದರಿಂದ ಅವನು ಉಕ್ಥನೆನಿಸಿದ್ದಾನೆ.

ಆತ್ಮಾ, ಶಿರಸ್ಸು, ದಕ್ಷಿಣಪಕ್ಷ, ಉತ್ತರ ಪಕ್ಷ, ಹಾಗೂ ಪುಚ್ಛ ಎಂದು ಐದು ಭಾಗಗಳದ್ದು ನಾರಾಯಣಾದಿ ಐದು ರೂಪಗಳಿಂದ ಇರುವವನು ಮತ್ತು ಬೃಹತೀಸಹಸ್ರವೂ ಸಹ ಪ್ರಾಗ್ಭಾಗ, ಗಾಯತ್ರ ತೃಚಾಶೀತಿ, ಬಾರ್ಹತ ತೃಚಾಶೀತಿ, ಔಷ್ಣಿಹತೃಚಾಶೀತಿ, ಉತ್ತರಭಾಗವೆಂದು ಐದು ಭಾಗಗಳಿಂದ ಕೂಡಿದ್ದು ವಿಷ್ಣುವು ಅನಿರುದ್ಧಾದಿ ಪಂಚರೂಪಗಳಿಂದ ಇರುವನು.

ನಾರಾಯಣನೇ ಸದಾ ನಿತ್ಯ ಪೂರ್ಣಗುಣ ಉಳ್ಳವನಾದ್ದರಿಂದ ಆತ್ಮನೆಂದು ಶ್ರುತಿಯಲ್ಲಿ ಉಕ್ತನಾಗಿದ್ದಾನೆ. ಆ ನಾರಾಯಣನು, ನಾರಾಯಣ-ನಾರಾಯಣ ರೂಪದಿಂದ ಐದು ಬಗೆಯಾಗಿ ಸದಾ ಇರುತ್ತಾನೆ. ಎಲ್ಲ ಜಗತ್ತಿಗೂ ಸೃಷ್ಟಿಕರ್ತನಾದ್ದರಿಂದ ಅವನು ಉಕ್ಥನೆನಿಸುತ್ತಾನೆ ಮತ್ತು ಬೃಹತೀ ಸಹಸ್ರರೂಪವಾದ ಉಕ್ಥದಲ್ಲಿ ಐದು ರೂಪದಿಂದ ಇರುತ್ತಾನೆ.

ಏಕೆಂದರೆ ಆ ಶಸ್ತ್ರಮಂತ್ರವು ಐದು ಭಾಗವುಳ್ಳದ್ದು. ಎಂಭತ್ತು ಋಚೆಗಳ ಮೂರು ಗುಂಪುಗಳು – ಇವುಗಳ ಪೂರ್ವ ಮತ್ತು ಅಪರ ಭಾಗಗಳೆರಡು ಹೀಗೆ ಐದು ಭಾಗಗಳುಳ್ಳದು ಅದು.

**8. *ಬೃಹತೀ ಸಹಸ್ರವು – ವಿಷ್ಣು ಸಹಸ್ರನಾಮ ವ್ಯಾಖ್ಯಾನ :***

***"ತದೇತತ್ ಸಹಸ್ರಂ ತತ್ ಸರ್ವಂ ।"*** ಎಂಬಂತೆ ವಿಷ್ಣು ಸಹಸ್ರನಾಮ ಪ್ರತಿಪಾದ್ಯ ರೂಪವಗಳು ಅನಂತವಿವೆ.

ಈ ಬೃಹತೀ ಸಹಸ್ರ ಪ್ರತಿಪಾದ್ಯ ರೂಪವೂ ಅನಂತ.

ಈ ಬೃಹತೀ ಸಹಸ್ರವು ಸ್ವರೂಪದಿಂದ ಪರಿಮಿತವೇ ಆಗಿದ್ದರೂ ಅನಂತರೂಪ ಪ್ರತಿಪಾದನಾ ಶಕ್ತಿಯ ದೃಷ್ಟಿಯಿಂದ ಅನಂತವೆ.

ಸಹಸ್ರನಾಮಗಳು ಹೇಳುವ ಸಹಸ್ರ ರೂಪವನ್ನು ಬೃಹತೀಸಹಸ್ರವೂ ಹೇಳುತ್ತದೆ. ಸಹಸ್ರನಾಮ ಎಂಬಲ್ಲಿ ಸಹಸ್ರವೆಂದರೆ ಅನಂತವೇ. ಸಹಸ್ರನಾಮಗಳೂ ಅನಂತ. ಅದನ್ನು ವ್ಯಾಖ್ಯಾನಿಸುವ ಬೃಹತೀಸಹಸ್ರವೂ ಅನಂತ. ಸಹಸ್ರನಾಮಗಳನ್ನು ಗಣನೆ ಮಾಡುವಾಗ ಸಾವಿರವೇ ಕಂಡು ಬಂದರೂ ಅನಂತರೂಪ ಪ್ರತಿಪಾದುಕವಾದುದರಿಂದ ಅವೂ ಅನಂತವೆ. ಹೀಗೆ ಬೃಹತೀಯ ಪಾರಾಯಣಾದಿಗಳಿಂದ ಏಕಕಾಲದಲ್ಲಿ ಅನುತಾನಂತ ನಾಮೋಪಾಸನೆಯಾಗುತ್ತದೆ.

ಈ ಸಾವಿರ ನಾಮಗಳು ಅನಂತರೂಪ ಪ್ರತಿಪಾದುಕವಾದುದರಿಂದಲೆ ಮುಖ್ಯವಾಗಿ ಅನಂತವಾಚಕವಾದ ಸಹಸ್ರ ಶಬ್ಧದಿಂದ ಕರೆಯಲ್ಪಡುತ್ತವೆ. ಸ್ವರೂಪದಿಂದ ನಾಮಗಳು ಕೇವಲ ಸಾವಿರವೆ ಇವೆ ಅನಂತವಲ್ಲ. ಆ ಭಗವದ್ರೂಪವು ಅನಂತವಾಗಿದ್ದರೂ ಈ ನಾಮಗಳ (ಸಹ) ಜೊತೆಗೆ ಪ್ರತಿಪಾದಕವಾಗಿ ಕೂಡಿದ್ದು ಸಹಸ್ರವೆನಿಸಿದೆ. ಆದ್ದರಿಂದ ಅನಂತವೆ. ಸಹಸ್ರವೆಂದರೆ ಮುಖ್ಯವಾಗಿ ಅನಂತವೆ. ಅನಂತ ನಾಮಗಳನ್ನು ಹೇಳುವ ಸಹಸ್ರನಾಮವು ಸಹ+ಸ್ರ ಎನಿಸಿದೆ.

ಆದ್ದರಿಂದ, ಈ ಬೃಹತೀಸಹಸ್ರವು ವಿಶ್ವಾದಿ ಸರ್ವನಾಮಾತ್ಮಕವಾದ್ದರಿಂದ ಬೃಹತೀಸಹಸ್ರಪಠನದಿಂದ ವಿಶ್ವಾದಿ ಸರ್ವರೂಪವನ್ನೂ ಸ್ತುತಿಸಿದಂತಾಗುವುದು.

ಸಾಮದಲ್ಲಿ ಬರುವ ಸ್ತೋಭಾಕ್ಷರ ಪ್ರತಿಪಾದ್ಯನಾದ ಹರಿಯು ಅನಂತರೂಪಿ. ಈ ಸ್ತೋಭಾಕ್ಷರವೂ ಅನಂತ. ಬೃಹತೀಸಹಸ್ರ ಪ್ರತಿಪಾದ್ಯನಾದ ಹರಿಯು ಅನಂತರೂಪಿ. ಈ ಬೃಹತೀ ಸಹಸ್ರವೂ ಅನಂತರೂಪಗಳಲ್ಲಿ ಅನಂತವಾಗಿಯೇ ಪ್ರವೃತ್ತಿ ಮಾಡುತ್ತದೆ.

ವಿಷ್ಣು ಸಹಸ್ರನಾಮ ಪ್ರತಿಪಾದ್ಯನಾದ ವಿಷ್ಣುವಿನ ಸಹಸ್ರ ರೂಪವನ್ನು ಬೃಹತೀಸಹಸರವೂ ಬೇರೆ ಬೇರೆಯಾಗಿ ಒಂದೊಂದು ಋಕ್ಕಿನಲ್ಲಿ ಒಂದೊಂದು ನಾಮದಂತೆ ಹೇಳುತ್ತದೆ. ಸಹಸ್ರನಾಮ ಎಂಬಲ್ಲಿ ಸಹಸ್ರ ಶಬ್ದವು ಅನಂತವನ್ನೇ ಹೇಳುವುದರಿಂದ ಸಹಸ್ರ ಎಂದು ಹೆಸರಿನಿಂದ ವಿಷ್ಣುವಿನ ಅನಂತ ನಾಮಗಳೆ ಹೇಳಲ್ಪಡುತ್ತವೆ. ಅನಂತ ರೂಪಗಳಿಗೆ ಬೇರೆ ಬೇರೆಯಾಗಿ ಅನಂತನಾಮಗಳೆ ಇದ್ದರೂ ಅವುಗಳನ್ನು ಪಠಿಸಲು ಜನರು ಅಶಕ್ತರಾಗಿರುವುದರಿಂದ ಅನಂತ ರೂಪವಾಚಕವಾದ ಈ ನಾಮ ಸಹಸ್ರವು ಪ್ರತ್ಯೇಕವಾಗಿ ಮಹಾಭಾರತದಲ್ಲಿ ಉಕ್ತವಾಗಿದೆ.

ಪರಬ್ರಹ್ಮನು ಎಷ್ಟು ರೂಪಗಳಿಂದ ಇರುವನೋ ಅಷ್ಟು ರೂಪಗಳನ್ನು ನಾಮವು ಪ್ರತಿಪಾದಿಸುತ್ತದೆ ಎಂಬ ವೇದ ವಾಕ್ಯದ ಆಧಾರದಿಂದ 'ಸಹ' ಅಂದರೆ ಅನಂತ ರೂಪಗಳೊಡನೆ ಪ್ರತಿಪಾದಕತ್ವ ಸಂಬಂಧದಿಂದ ಕೂಡಿದ್ದು 'ಸ್ರ' ಅಂದರೆ ಪ್ರತಿಪಾದನ ಮಾಡುವುದರಿಂದ ಸಾವಿರನಾಮವು ಸಹಸ್ರವೆನಿಸಿದೆ.

ಹೀಗೆ ಬೃಹತೀಸಹಸ್ರವು ಅನಂತರೂಪ ಪ್ರತಿಪಾದಕವಾದ ವಿಷ್ಣು ಸಹಸ್ರನಾಮಕ್ಕೆ ವ್ಯಾಖ್ಯಾನ ರೂಪವಾದ್ದರಿಂದ ಅನಂತರೂಪ ಪ್ರತಿಪಾದಕವಾಗಿದೆ.

## 9. *ಬೃಹತೀಸಹಸ್ರವೂ, ಸಾಮವೂ ಮತ್ಸ್ಯಾದಿ ನಾಮಗಳ ವ್ಯಾಖ್ಯಾನ ರೂಪ :*

ಭಗವಂತನ ಮತ್ಸ್ಯಾದಿರೂಪಗಳು ಹತ್ತು ಬೃಹತೀಸಹಸ್ರದ ಐದು ಭಾಗಗಳೂ ಸಾಮದ ಐದು ಭಾಗಗಳೂ ಒಟ್ಟು ಸೇರಿ ಹತ್ತು, ಆ ಹತ್ತು ಭಗವದ್ರೂಪಗಳು ಹತ್ತು ಶಸ್ತ್ರ ಸಾಮ ಭಾಗಗಳಿಂದ ಪ್ರತಿಪಾದ್ಯಗಳು. ಆ ಹತ್ತು ರೂಪಗಳೇ ಅನಂತರೂಪಾತ್ಮಕಗಳು. ಉದಾ. : ಮತ್ಸ್ಯ ರೂಪ ಒಂದೇ, ಮತ್ಸ್ಯ, ಮತ್ಸ್ಯ ಕೂರ್ಮ, ಮತ್ಸ್ಯ ವರಾಹ, ಎಂದು ಮುಂತಾಗಿ ಮತ್ಸ್ಯವ್ಯಾಸ, ಮತ್ಸ್ಯಹಂಸ ಎಂದು ಮುಂತಾಗಿಯೂ ಅನೇಕವಾಗುವುದರಿಂದ ಅನಂತ.

ಆ ಮತ್ಸ್ಯಾದಿ ದಶಾನಾಮಗಳೆ ಅನಂತ ರೂಪವಾಚಕಗಳಾಗಿವೆ. ಏಕೆಂದರೆ, ಅನಂತ ರೂಪಗಳ ಲಕ್ಷಣವನ್ನು ಈ ದಶನಾಮಗಳೇ ಹೇಳಬಲ್ಲವು.

ಆದ್ದರಿಂದ ಮತ್ಸ್ಯಾದಿ ನಾಮಗಳು ಹೇಳುವ ಭಗವದ್ರೂಪಗಳು ಅನಂತವಾದುದರಿಂದ ಅವುಗಳ ವ್ಯಾಖ್ಯಾನ ರೂಪವಾದ ಹತ್ತು ಸಾಮಶಸ್ತ್ರ ಭಾಗಗಳು ಆ ವಿಷ್ಣುವಿನ ಅನಂತರೂಪಗಳೆನ್ನೇ ಹೇಳುತ್ತವೆ.

ಮತ್ಸ್ಯ. ಕೂರ್ಮ. ವರಾಹ. ನೃಸಿಂಹ. ವಾಮನ. ಪರಶುರಾಮ. ರಘುರಾಮ. ಕೃಷ್ಣ. ಬುದ್ಧ. ಕಲ್ಕಿ – ಇವು ಹರಿಯ ಹತ್ತು ರೂಪಗಳು ಮೊದಲಿನ ಐದು ರೂಪಗಳು ಐದು ಭಾಗಗಳಿಂದ ಕೂಡಿದ ಬೃಹತೀ ಸಹಸ್ರದಿಂದ ಶಂಸನ ಮಾಡಲ್ಪಡುತ್ತವೆ. ಮುಂದಿನ ಐದು ರೂಪಗಳು ಪ್ರಸ್ತಾವ ಮೊದಲುಗೊಂಡು ನಿಧನದವರೆಗಿನ ಐದು ಸಾಮಭಾಗಗಳಿಂದ ಸ್ತೋತ್ರ ಮಾಡಲ್ಪಡುತ್ತವೆ.

### *10. ಬೃಹತೀ ಸಹಸ್ರ ಅನ್ನದಂತೆ ಪ್ರೀತಿಕರ :*

ತೃಚಾಶೀತಿತ್ರಯಾತ್ಮಕವಾದ ಬೃಹತೀಸಹಸ್ರವು ಗಾಯತ್ರೀ, ಬೃಹತೀ, ಉಷ್ಣಿಕ್ ಎಂಬ ಮೂರು ಛಂದಸ್ಸುಗಳಲ್ಲಿದೆ. ಈ ತೃಚಾಶೀತಿತ್ರಯವು ಈ ಮೂರು ಛಂದೋ ನಿಬದ್ಧವಾದ ಭಾಗಗಳಿಂದ ಕ್ರಮವಾಗಿ ಭೋಜ್ಯ, ಪೇಯ, ಖಾದ್ಯ ಎಂಬ ಮೂರು ಬಗೆಯಿಂದ ಇದ್ದು ಅನ್ನದಂತೆ ಅಪರಬ್ರಹ್ಮನನ್ನು ತೃಪ್ತಿಪಡಿಸುತ್ತದೆ.

ಬೃಹತೀಸಹಸ್ರವು ಭಗವಂತನ ಅನಂತರೂಪಗಳನ್ನು ವರ್ಣಿಸುತ್ತದೆ, ಎನ್ನಲು ಅದು ಭಗವಂತನಿಗೆ ಅತ್ಯಂತ ಪ್ರೀತಿಕರವೆನಿಸಿರುವುದೇ ಸಾಕ್ಷಿ. ಭಗವಂತನನ್ನು ಯಾವ ಮಂತ್ರ ವಿಶೇಷವಾಗಿ ಸ್ತುತಿಸುವುದೋ ಅದುವೇ ಪ್ರೀತಿಕರವಾಗುವುದ ಸಹಜ. ಬೃಹತೀಸಹಸ್ರವು ಅನ್ನಮಶ್ನೀತಯಃ ಅನ್ನೇನ ಹೀದಂ ಸರ್ವಮಶ್ನುತೇ ಎಂದು ಹಿಂದೆ ಹೇಳಿದಂತೆ ಅನ್ನದಷ್ಟು ತೃಪ್ತಿಕರವಾಗಿದೆ ಎಂದು ಪೂರ್ವೋಕ್ತವಾದುದನ್ನು ಸ್ಮರಣೆ ಮಾಡಿಸಿ ದೃಷ್ಟಾಂತ ಪೂರ್ವಾಕವಾಗಿ ಇಲ್ಲಿ ವಿವರಿಸಲಾಗಿದೆ. ಅನ್ನದಲ್ಲಿ ಮುಖ್ಯವಾಗಿ ಮೂರು ಬಗೆಗಳುಂಟು ಎಲ್ಲವೂ ತೃಪ್ತಿಕರ, ಹಾಗೆಯೇ ಬೃಹತೀಸಹಸ್ರದಲ್ಲಿಯೂ ಮುಖ್ಯವಾಗಿ ಮೂರು ಛಂದಸ್ಸುಗಳುಂಟು. ಅವು ಅನ್ನಪಾನ ಭಕ್ಷ್ಯಗಳನ್ನು ಉಂಡಾಗ ಆಗುವ ಆನಂದದಂಥ ತೃಪ್ತಿಯನ್ನು ಭಗವಂತನಿಗೆ ಉಂಟು ಮಾಡುವುವು.

### *11. ಬೃಹತೀ ಸಹಸ್ರದ ಛಂದಸ್ಸು ಯಾವುದು :*

ಹೀಗೆ ಸಿದ್ಧಪಡಿಸಿದ ಬೃಹತೀಸಹಸ್ರವೆ ಪಠಿಸಲು ಪ್ರಶಸ್ತವಾದುದು. ಕೆಲವರು ಯಾವುದಾದರೂ ನಾನಾ ಛಂದಸ್ಸುಗಳ ಸಾವಿರ ಋಚಿಗಳು ಪ್ರಶಸ್ತವೆನ್ನುತ್ತಾರೆ. ಛಂದಸ್ಸುಗಳಲ್ಲಿ ತಾರತಮ್ಯವಿಲ್ಲದುದರಿಂದ ಯಾವುದೇ ಒಂದು ಛಂದಸ್ಸನ್ನು ಪಠಿಸಿದರೂ ಅದಕ್ಕಿಂತ ಹೆಚ್ಚು ಪ್ರಶಸ್ತವೆನ್ನಬಹುದಾದುದು ಬೇರೆ ಏನಿರುತ್ತದೆ ಎನ್ನುತ್ತಾರೆ. ಬೃಹತೀ ಛಂದಸ್ಸಿಗಿಂತ ಶ್ರೇಷ್ಠವಾದ ಇನ್ನೊಂದು ಛಂದಸ್ಸನ್ನು ಹೇಳುತವೆ ಎನ್ನುತ್ತ

ಕೆಲವರು ಬೃಹತಿಗಿಂತ ಹೆಚ್ಚು ಅಕ್ಷರಗಳುಳ್ಳ ತ್ರಿಷ್ಟುಪ್ ಛಂದಸ್ಸಿನ ಸಾವಿರ ಋಚೆಗಳೆ ಶ್ರೇಷ್ಠವೆನ್ನುತ್ತಾರೆ. ಇನ್ನು ಕೆಲವರು ಹೆಚ್ಚು ಅಕ್ಷರವುಳ್ಳ ಜಗತೀ ಛಂದಸ್ಸಿನ ಸಾವಿರ ಋಚೆಗಳೆ ಶ್ರೇಷ್ಠವೆನ್ನುತ್ತಾರೆ. ಮತ್ತೆ ಕೆಲವರು ಅನುಷ್ಟಪ್ ಛಂದಸ್ಸಿನ ಸಾವಿರ ಋಚೆಗಳೆ ಸರ್ವಶ್ರೇಷ್ಠವೆನ್ನುತ್ತಾರೆ.

## *12. ಬೃಹತೀ ಛಂದಸಸಿನ ಮಹಿಮೆ – ಐತರೇಯನ ಅಭಿಪ್ರಾಯ :*

ನಾನಾ ಛಂದಸ್ಸು ಪ್ರಶಸ್ತವೆನ್ನುವ ಪಕ್ಷ, ತ್ರಿಷ್ಟುಪ್ ಛಂದಸ್ಸೆ ಪ್ರಶಸ್ತವೆನ್ನುವ ಪಕ್ಷ, ಜಗತ್ತೀ ಛಂದಸ್ಸೆ ಪ್ರಶಸ್ತವೆನ್ನುವ ಪಕ್ಷ – ಈ ಮೂರು ಪಕ್ಷವೂ ಅಪೂರ್ಣ, ನಿರಾಧಾರ ವಿಮರ್ಶೆಗೂ ಯೋಗ್ಯವಲ್ಲ. ಅನುಷ್ಟಪ್ ಛಂದಸ್ಸೆ ಪ್ರಶಸ್ತವೆನ್ನುವ ನಿನ್ನ ಪಕ್ಷವು ವಿಮರ್ಶೆಗೆ ಯೋಗ್ಯ, ನೀನು ನನ್ನ ಪ್ರಿಯ ಶಿಷ್ಯನೂ ಆಗಿರುವಿ. ಆದ್ದರಿಂದ ಅನ್ಯಪಕ್ಷಗಳ ಬಗ್ಗೆ ಏನೂ ಹೇಳದೆ. ನಿನ್ನ ಪಕ್ಷದ ಬಗ್ಗೆ ಮಾತ್ರ ಹೇಳುತ್ತೇನೆ. ಅನುಷ್ಟಪ್ ಛಂದಸ್ಸಿನ ಅಭಿಮಾನಿನಿ, ವಾಗಭಿಮಾನಿನಿಯಾದ ಉಮೆ ಪರಬ್ರಹ್ಮನಿಗೆ ಅಪೂರ್ಣ ಪ್ರತಿಮೆ. ಏಕೆಂದರೆ, ಪೂರ್ಣ ಎಂಬ ಅರ್ಥದ ಬ್ರಹ್ಮಶಬ್ದದಿಂದ ಅವಳು ಕರೆಸಿಕೊಳ್ಳುವುದಿಲ್ಲ ಮತ್ತು ಪ್ರಾಣಾಭಿಮಾನಿ ವಾಯುವಿನಿಂದಲೂ, ಮನೋಭಿಮಾನಿರುದ್ರನಿಂದಲೂ, ವಿಷಯ ಪದಾರ್ಥಗಳ ಕಡೆಗೆ ಜೀವನು ಪ್ರೇರಿತನಾಗುವಾಗಲೆ ಅವನು ವಿಷಯ ಪದಾರ್ಥಗಳನ್ನು ಅನುಭವಿಸುವವನು ಹೊರತು ಕೇವಲ ಮಾತಿನಿಂದಲೆ ಅನುಭವಿಸುವುದಿಲ್ಲ. ಬೃಹತೀ ಛಂದಸ್ಸಿನ ಸಾವಿರ ಋಚೆಗಳನ್ನೇ ಸಂಗ್ರಹಿಸಬೇಕು. ಬೃಹತೀ ಛಂದಸ್ಸಿನ ಅಭಿಮಾನಿ ವಾಯುವೆ. ಎಲ್ಲರಿಗಿಂತ ಹೆಚ್ಚು ಪೂರ್ಣವಾದ ವಿಷ್ಣುಪ್ರತಿಮೆ. ಆದ್ದರಿಂದಲೇ ಪೂರ್ಣವಾಚಕ ಬ್ರಹ್ಮಶಬ್ದದಿಂದ ಅವನು ಕರೆಸಿಕೊಳ್ಳುತ್ತಾನೆ. ಹೀಗೆ ಮಹಾಮಹಿಮೆ ಉಳ್ಳವನಾದ್ದರಿಂದಲೇ ವಾಯುವು ಬೃಹತೀ ಎನಿಸುತ್ತಾನೆ. ಹೀಗೆ ಮಹಾಮಹಿಮೋಪೇತವಾದ್ದರಿಂದಲೇ ಬೃಹತೀ ಛಂದ್ಸು ಬೃಹತೀ ಎನಿಸಿದೆ. ಆದ್ದರಿಂದ ಅದು ಎಲ್ಲ ಛಂದ್ಸುಗಳಗಿಂತ ಶ್ರೇಷ್ಠ ಎಂದು ಮಹೈತರೇಯನು ಹೇಳದನು.

## *13. ಛಂದಸ್ಸುಗಳಲ್ಲೆಲ್ಲ ಬೃಹತೀ ಶ್ರೇಷ್ಠ :*

ದೇಹದ ಮಧ್ಯಭಾಗವು ಸುತ್ತಲೂ ಇತರ ಅಂಗಗಳಂದ ಪರಿವೃತವಾಗಿದೆ. ಅದರಂತೆಯೇ ಬೃಹತಿಯೂ ಸುತ್ತಲೂ ಇರುವ ಛಂದಸ್ಸುಗಳಂದ ಪರಿವೃತವಾಗಿದೆ. ಆದ್ದರಿಂದಲೇ, ದೇಹದ ಮಧ್ಯಭಾಗವು ಮಧ್ಯವೆನಿಸಿದಂತೆ ಬೃಹತಿಯೂ ಛಂದಸ್ಸುಗಳಲ್ಲೆಲ್ಲ ಮಧ್ಯ ಎನಿಸಿದೆ. ಬೃಹತೀಸಹಸ್ರವನ್ನು ಪಠಿಸುವವನು ಮೋಕ್ಷ ಪಡೆಯಬಲ್ಲ. ಎಲ್ಲೆಡೆ

ಹರಡುವಂಥ ಪ್ರಸಿದ್ಧಿ ಹೊಂದಬಲ್ಲ. ಮಂಗಳಕರವಾದ ಪ್ರಶಂಸೆಗೆ ಪಾತ್ರನಾಗಬಲ್ಲ. ಆಯಸ್ಸುತೀರುವ ಮುನ್ನಬೇಕೆನಿಸಿದಾಗ ಮರಣ ಹೊಂದಲೂ ಶಕ್ತನಾಗುವ ಎಂದು ಮಹೈತರೇಯನು ಹೇಳಿದನು. ಬೃಹತ್ಯಭಿಮಾನಿಯಾದ ಈ ವಾಯುಭಗವಂತನಿಗೆ ಪೂರ್ಣ-ಪ್ರತಿಮೆಯಾದುದರಿಂದ ಬೃಹತಿಯೂ ಭಗವಂತನಿಗೆ ಉತ್ತಮ ಪ್ರತಿಮೆ. ಆದ್ದರಿಂದ ಬೃಹತೀ ಛಂದಸ್ಸಿನ ಸಾವಿ ಋಚೆಗಳನ್ನೆ ಸಂಗ್ರಹಿಸಬೇಕು.

ಬೇರೆ ಎಲ್ಲ ಛಂದಸ್ಸೂ ಚತುರ್ಮುಖನ ಶರೀರದ ಬೇರೆ ಬೇರೆ ಅಂಗಗಳಿಂದ ಹುಟ್ಟಿವೆ. ಬೃಹತೀ ಛಂದಸ್ಸು ದೇಹದ ಮಧ್ಯಭಾಗದಿಂದ ಹುಟ್ಟಿದೆ. ಆದ್ದರಿಂದ ಬೃಹತೀಯು ಇತರ ಛಂದಸ್ಸುಗಳಿಂದ ಪರಿವೃತವಾಗಿದೆ. ಬೃಹತೀಸಹಸ್ರದಲ್ಲಿಯೂ ತ್ರ್ಯಶೀತಿಯ ಮಧ್ಯಭಾಗವು ಬೃಹತೀ ಋಚೆಗಳೆ. ವಿಷ್ಣುಪ್ರತಿಮೆಗಳೆನಿಸಿದ ಸಪ್ತಛಂದಸ್ಸುಗಳಲ್ಲಿಯೂ ಬೃಹತಿಯು ನಡುವೆ ಬರುತ್ತದೆ. ಗಾಯತ್ರೀ, ಉಷ್ಣಿಕ್, ಅನುಷ್ಟಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ ಎಂದು. ಆದ್ದರಿಂದ, ಎಲ್ಲ ರೀತಿಯಿಂದಲೂ ಬೃ ಹತಿಯೇ ಛಂದದ್ದುಗಳಲ್ಲೆಲ್ಲ ಮಧ್ಯ ಎನಿಸಿದೆ.

ಅನುಷ್ಟಪ್‌ಗಿಂತ ಹೆಚ್ಚು ಫಲನೀಡುವುದರಿಂದಲೂ ಬೃಹತಿಯು ಶ್ರೇಷ್ಠವೆಂಬ ಅಭಿಪ್ರಾಯದಿಂದ ಬೃಹತೀಸಹಸ್ರ ಪಠನದ ಫಲವನ್ನು ಹೇಳಿದೆ.

### 14. *ಬೃಹತೀಯು ಗಾತ್ರದಲ್ಲಿಯೂ ಮಹಿಮೆಯಲ್ಲಿಯೂ ಬೃಹತಿಯೇ :*

ಹಿಂದೆ ಹೇಳಿದಂತೆ ಈ ಬೃಹತೀ ಸಹಸ್ರವನ್ನು ಸಂಗ್ರಹಿಸಿದಾಗ ಮಾತ್ರ ಅದು ಉತ್ತಮವೆನಿಸುತ್ತದೆ. ಏಕೆಂದರೆ, ಒಂದು ಸಹ್ರ ಬೃಹತೀ ಋಚೆಗಳನ್ನು ಕೂಡಿಸಿದಾಗ ಅದರಿಂದ ಸಾವಿರದ ನೂರ ಇಪ್ಪತ್ತೈದು (1125) ಅನುಷ್ಟಪ್ ಋಚೆಗಳು ಲಭಿಸುತ್ತವೆ. ಹೆಚ್ಚು ಸಂಖ್ಯೆಯಲ್ಲಿ ಕಡಿಮೆ ಸಂಖ್ಯೆಯು ಸೇರಿ ಹೋಗುತ್ತದೆ. $\left(\frac{32 \div 3600}{1125}\right)$

ಬೃಹತೀ ಛಂದಸ್ಸಿನ ಸಾವಿರ ಋಚೆಗಳನ್ನು ಪಠಿಸಿದಾಗ ಅನುಷ್ಟಪ್ ಛಂದಸ್ಸಿನ ಸಾವಿರ ಋಚೆಗಳ ಪಠನಕ್ಕಿಂತ ನೂರ ಇಪ್ಪತ್ತೈದು ಅನುಷ್ಟಪ್ ಋಚೆಗಳಷ್ಟು ಅಧಿಕ ಲಾಭ ಉಂಟಾಗುತ್ತದೆ. ಹೀಗೆ ಅಧಿಕ ಲಾಭವಿರುವುದರಿಂದ ಬೃಹತೀ ಛಂದಸ್ಸಿನ ಸಾವಿರ ಋಚೆಗಳ ಪಠನವೆ ಹೆಚ್ಚು ಪ್ರಶಸ್ತ. ಏಕೆಂದರೆ ಅನುಷ್ಟಪ್ ಛಂದಸ್ಸಿನ ಸಾವಿರ ಋಚೆಗಳು ಬೃಹತೀ ಛಂದಸ್ಸಿನ ಸಾವಿರ ಋಚೆಗಳಲ್ಲಿ ಸೇರಿ ಹೋಗುತ್ತವೆ. ಜಗತ್ ಮುಂತಾದ ಛಂದಸ್ಸಿನಲ್ಲಿ ಅಧಿಕ ಲಾಭವಿದ್ದರೂ ಬೃಹತೀಯಂತೆ ಮಹಾತ್ಮ್ಯವಿಲ್ಲದಿರುವುದರಿಂದಲೇ ಅದನ್ನು ಕಡೆಗಣಿಸಲಾಗುತ್ತದೆ.

## 15. ಬೃಹತಿಯೇ ಋಷಿ ಸಮ್ಮತಃ :

ಒಬ್ಬ ಮಂತ್ರ ದ್ರಷ್ಟಾರನ್ನು ಹೀಗೆ ಹೇಳಿದ್ದಾನೆ – ವಾಚ ಮಷ್ಟಾಪದೀಮಹಂ ಅಂದರೆ ನಾಲ್ಕು ಅಕ್ಷರಗಳ ಎಂಟು ಭಾಗಗಳು ಅನುಷ್ಟಪ್ ಛಂದಸ್ಸಿನಲ್ಲಿರುತ್ತವೆ. ನವಸ್ರಕ್ತಿಂ ಎಂದರೆ, ಒಂದು ಅನುಷ್ಟಪ್ ಮಂತ್ರಕ್ಕೆ ಅದರ ಮುಂದಿನ ಅನುಷ್ಟಪ್ ಮಂತ್ರದಿಂದ ನಾಲ್ಕು ಅಕ್ಷರಗಳ ಒಂಭತ್ತು ಭಾಗಗಳಾಗುತ್ತವೆ. ಋತಸ್ಪೃಶಂ ಎಂದರೆ ಅನುಷ್ಟಪ್ ಮಂತ್ರವು ಬೃಹತೀ ಮಂತ್ರ ರೂಪದಿಂದ ಸತ್ಯನಾದ ಭಗವಂತನನ್ನು ಸ್ತುತಿಸುತ್ತದೆ ಎಂದರ್ಥ. ಇಂದ್ರಾತ್ ಪರಿತನ್ವಂ ಮಮೇ ಎಂದರೆ ಆ ಅನುಷ್ಟಪ್ ಛಂದಸ್ಸಿನಲ್ಲಿರುವ ಋಚೆಗಳನ್ನು ಬೃಹತಿಯಾಗಿ ಸಂಗ್ರಹಿಸುವಾಗ ಆ ಮೂಲಕ ಶ್ರೀಹರಿಗೂ ಪ್ರಾಣನಿಗೂ ಬೃಹತೀ ಎಂಬ ಪ್ರತಿಮೆಯನ್ನು ನಿರ್ಮಿಸುತ್ತಾನೆ. ಆ ಬೃಹತಿಯನ್ನು ತಿರುಗಿ ಅನುಷ್ಟಪ್ ಋಚೆಯನ್ನಾಗಿ ಸಿದ್ಧಗೊಳಿಸುವಾಗ ಬೃಹತೀ ಪ್ರತಿಮಾಂತರ್ಗತನಾದ ಪ್ರಾಣನಿಂದಲೂ ಪ್ರಾಣಾಂತರ್ಗತನಾದ ವಿಷ್ಣುವಿನಿಂದಲೂ ಅನುಷ್ಟಪ್ ದೇವತೆಯಾದ ಉಮೆ ಉತ್ಪನ್ನಳೆಂದು ನೆನೆಯುತ್ತಾನೆ ಮತ್ತು ವಿಷ್ಣುವಿಗೂ ವಾಯುವಿಗೂ ಉಮೆ ಎಂಬ ಪ್ರತಿಮೆಯನ್ನು ಮಾಡಿ ನಿಲ್ಲಿಸುತ್ತಾನೆ.

ಬೃಹತೀ ಋಚೆಗಳನ್ನು ಸಂಗ್ರಹಿಸಬೇಕೆಂಬ ವಿಷಯದಲ್ಲಿ ಇನ್ನೂ ಕೆಲವು ಯುಕ್ತಿಗಳನ್ನು ಇಲ್ಲಿ ಹೇಳಲಾಗಿದೆ. ಅನುಷ್ಟಪ್ ಋಚೆಗಳನ್ನೇ ಸಂಗ್ರಹಿಸುವ ಪಕ್ಷದಲ್ಲಿ, ಅನುಷ್ಟಪ್ ಋಚೆಗಳಿಂದ ಬೃಹತೀ ಋಚೆಗಳನ್ನು ಸಿದ್ಧಪಡಿಸಬೇಕೆಂದು ವಾಚಮಷ್ಟಾಪದೀಮಹಂ ಎಂಬ ಶ್ರುತಿ ಹೇಳುವುದು ಯುಕ್ತವಾಗಲಾರದು ಮತ್ತು ಬೃಹತೀ ಋಚೆಗಳನ್ನು ಸಾವಿರದ ನೂರಿಪ್ಪತ್ತೈದು ಅನುಷ್ಟಪ್ ಋಚೆಗಳನ್ನಾಗಿ ಸಿದ್ಧಪಡಿಸಿದಾಗ ವಿಷ್ಣುವಿಗೆ ಬೃಹತ್ಯಂತರ್ಗತ ಪ್ರಾಣ ಹಾಗೂ ಅನುಷ್ಟಪ್ ಅಂತರ್ಗತ ಉಮೆ ಎಂಬ ಎರಡು ಪ್ರತಿಮೆಗಳನ್ನೂ ಚಿಂತಿಸದಂತಾಗುತ್ತದೆ. ವಾಯುವಿನಿಂದ ಉಮೆಯ ಉತ್ಪತ್ತಿ ಎಂಬುದನ್ನೂ ಧ್ಯಾನಿಸಿದಂತಾಗುತ್ತದೆ ಎಂದು ವಾಚಮಷ್ಟಾಪದಿಯ ಎಂಬ ಶ್ರುತಿಯು ಬೃಹತೀಸಹಸ್ರ ಸಂಗ್ರಹವನ್ನೇ ಪ್ರಶಂಸೆ ಮಾಡುತ್ತದೆ.

**"ವಾಚಮಷ್ಟಾಪದೀ ಮಹಂ ನವ ಸ್ರಕ್ತಿಮೃತ ಸ್ಪೃಶಂ । ಇಂದ್ರಾತ್ ಪರಿತನ್ವಂಮಮೇ ॥**

ನಿತ್ಯನಾದ ಭಗವಂತನನ್ನು ಕೊಂಡಾಡುತ್ತಿರುವ ನಾಲ್ಕು ಅಕ್ಷರಗಳ ಎಂಟು ಭಾಗಗಳುಳ್ಳ ವಾಗಭಿಮಾನಿನಿ ಉಮೆಯಿಂದ ಅಭಿಮನ್ಯವಾದ ಅನುಷ್ಟಪ್ ಛಂದಸ್ಸಿನ ಮಂತ್ರವನ್ನು ಅದಕ್ಕೆ ಬೇರೆ ಮಂತ್ರದಿಂದ ಇನ್ನೂ ನಾಲ್ಕು

ಅಕ್ಷರ ಸೇರಿಸಿ ನಾಲ್ಕು ಅಕ್ಷರ ಒಂಭತ್ತು ಭಾಗಗಳುಳ್ಳ ಬೃಹತೀ ಮಂತ್ರವಾಗಿ ಸಿದ್ಧಪಡಿಸುವ ಮೂಲಕ ನಾನು ವಿಷ್ಣುವಿಗೂ ವಾಯುವಿಗೂ ಪ್ರತಿಮೆಯನ್ನು ಮನಸ್ಸಿನಲ್ಲಿ ಮಾಡಿಕೊಂಡೆನು. ಬೃಹತಿಯನ್ನು ತಿರುಗಿ ಅನುಷ್ಟಬನ್ನಾಗಿ ಮಾಡಿ ಬೃಹತ್ಯಭಿಮಾನಿ ವಾಯುವಿನಿಂದ ಅನುಷ್ಟುಭಿಮಾನಿನಿ ಉಮೆಯ ಉತ್ಪತ್ತಿಯಾಗುವುದನ್ನೂ ಧ್ಯಾನಿಸಿದೆನು ಎಂದು ಈ ಶ್ರುತಿಯು ಹೇಳುತ್ತದೆ. ಉಪನಿಷತ್ತು ಈ ಶ್ರುತಿಯನ್ನೇ ವ್ಯಾಖ್ಯಾನಿಸುತ್ತದೆ.

## *16. ಬೃಹತೀ ಸಹಸ್ರ ವಿಷ್ಣುವಿಗೆ ಪ್ರತಿಮೆ :*

ವಾಚಮಷ್ಟಾಪದೀಮಹಂ. ಎಂಬ ಶ್ರುತಿಯಲ್ಲಿ ಅನುಷ್ಟಪ್ ಮಂತ್ರಗಳಿಂದ ಬೃಹತೀ ಮಂತ್ರಗಳನ್ನೂ ಬೃಹತೀಮಂತ್ರಗಳಿಂದ ಅನುಷ್ಟಪ್ ಮಂತ್ರಗಳನ್ನೂ ಸಿದ್ಧಪಡಿಸಬೇಕೆಂದು ಹೇಳಿರುವುದರಿಂದಲೂ ಬೃಹತೀ ಸಹಸ್ರವನ್ನು ಸಂಗ್ರಹಿಸಿ ಪಠಿಸುವುದೇ ಉತ್ತಮ. ನಾಲ್ಕು ಅಕ್ಷರಗಳ ಎಂಟು ಭಾಗಗಳು ಸೇರಿದರೆ ಒಂದು ಅನುಷ್ಟಪ್ ಮಂತ್ರವಾಗುತ್ತದೆ. ಅದರಿಂದ ಬೃಹತೀ ಮಂತ್ರವನ್ನು ಸಿದ್ಧಪಡಿಸಿದಾಗ ಅದರಲ್ಲಿ ನಾಲ್ಕು ಅಕ್ಷರಗಳ ಒಂಭತ್ತು ಭಾಗಗಳಾಗುತ್ತವೆ. ಋಚಾವಾಗ್ ಎಂದರೆ ಋಚೆಯ ರೂಪದಲ್ಲಿರುವ ಅನುಷ್ಟಪ್. ಋತಂಸ್ಪೃಷ್ಟಾ ಸತ್ಯ ಸ್ವರೂಪನಾದ ವಿಷ್ಣುವಿಗೆ ಪ್ರತಿಪಾದಕವಾಗುತ್ತದೆ. ಐಂದ್ರಾತ್ ಪ್ರಾಣಾತ್ ಎಂದರೆ ಇಂದ್ರಸ್ಯ ಪರಮೈಶ್ವರ್ಯಶಾಲಿಯಾದ ವಿಷ್ಣುವಿಗೆ ಸಂಬಂಧಿ ಎನಿಸಿದವ ಬಹಳ ಪ್ರೀತಿಪಾತ್ರನಾದ್ದರಿಂದ ಪ್ರಾಣಾಭಿಮಾನಿ ದೇವತೆಯಾದ ವಾಯು. ಅವನಿಗೆ ಪ್ರತಿಮಾರೂಪವಾದುದು ಈ ಬೃಹತೀ ಸಹಸ್ರ. ಆ ವಾಯು ವಿಷ್ಣುವಿಗೆ ಮುಖ್ಯಪ್ರತಿಮೆ. ಆದ್ದರಿಂದ ವಿಷ್ಣವಿಗೇ ಪ್ರತಿಮೆ ಬೃಹತೀಸಹಸ್ರ.

## *17. ಬೃಹತೀ ಸಹಸ್ರ ಅ ಕಾರದ ವ್ಯಾಖ್ಯಾನಃ :*

ಈ ಬೃಹತಿ ಸಹಸ್ರವೇ ಅ ಕಾರದ ಉತ್ತಮ ವ್ಯಾಖ್ಯಾನ.

ಸವಾ ಏಷ ವಾಚಃ ಪರಮೋವಿಕಾರಃ ಎಂದರೆ ಅಕಾರವೆಂಬ ಶಬ್ದದ ವ್ಯಾಖ್ಯಾನಗಳಲ್ಲಿ ಬೃಹತೀಸಹಸ್ರವೆಂಬ ವ್ಯಾಖ್ಯಾನವೆ ಉತ್ತಮ ಎಂದರ್ಥ. ಅಕಾರಕ್ಕೆ ವಿರುದ್ಧ, ಅಧ್ಯಕ್ಷ ಅಭಾವವೆಂಬ ಮೂರು ಅರ್ಥಗಳಿದ್ದು ಆಕಾರವು ಪರಮಾತ್ಮನ ಮುಖ್ಯವಾದ ನಾಮವಾಗಿದೆ.

ವಾಚಾಮಷ್ಟಪದೀಮಹಂ ಇತ್ಯಾದಿ ಕಡೆಗಳಲ್ಲಿ ವಾಕ್ ಎಂದರೆ ಅನುಷ್ಟಪ್ ಎಂಬ ಅರ್ಥವನ್ನು ಗ್ರಹಿಸಲಾಗಿದೆ. ಸವಾ ಏಷವಾಚಃ ಪರಮೋವಿಕಾರಃ ಎಂಬಲ್ಲಿಯೂ ಅದೇ ಅರ್ಥವಿಟ್ಟು ಕೊಂಡರೆ ಅನುಷ್ಟಪ್ಪಿಗೆ ಬೃಹತೀಯು ವ್ಯಾಖ್ಯಾನದಂತಾಗುವುದರಿಂದ ಬೃಹತಿಯ ಮಹಿಮೆಗೆ ಕುಂದು ಬಂದಿತು.

ಆದ್ದರಿಂದ ಅಕಾರವು ಸರ್ವದೋಷ ವಿರುದ್ಧ ಗುಣಪೂರ್ಣನೂ, ಚೇತನಾಚೇತನ ಪ್ರಪಂಚಕ್ಕಿಂತ ಅನ್ಯನೂ, ಸರ್ವದೋಷಾಭಾವವುಳ್ಳವನೂ ಆದ ವಿಷ್ಣುವನ್ನೇ ಹೇಳುತ್ತದೆ. ಬೇರೆ ಎಲ್ಲ ಶಬ್ದಗಳೂ ಕೆಲವು ವಿರುದ್ಧವನ್ನು ಕೆಲವು ಅನ್ಯವನ್ನೂ ಕೆಲವು ಅಭಾವವನ್ನೂ ಹೇಳಬಹುದು. ದೋಷ ವಿರುದ್ಧ ಗುಣಗಳಲ್ಲಿಯೂ ಕೆಲವು ಗುಣಗಳನ್ನು ಕೆಲವು ಶಬ್ದಗಳು ಹೇಳಬಹುದು. ಪರಬ್ರಹ್ಮನನ್ನು ವಿರುದ್ಧ, ಅನ್ಯ, ಅಭಾವಗಳೆಂಬ ಮೂರು ಮುಖಗಳಲ್ಲಿಯೂ ಪೂರ್ಣವಾಗಿ ಹೇಳಬಲ್ಲಶಬ್ದ ಅಕಾರ ಒಂದೇ ಆದ್ದರಿಂದ ಅಂಥ ಅಕಾರದ ವ್ಯಾಖ್ಯಾನಗಳಲ್ಲೆಲ್ಲ ಶ್ರೇಷ್ಠವಾದ ಈ ಬೃಹತೀ ಸಹಸ್ರವೇ ಪಠನೆಗೆ ಅತ್ಯಂತ ಪ್ರಶಸ್ತ. ತದ್ವಾ ಇದಂ ಬೃಹತೀ ಸಹಸ್ರಂ ಸಂಪನ್ನ ಎಂಬ ವಾಕ್ಯಕ್ಕೆ ಈ ಬೃಹತೀ ಸಹಸ್ರವು ಅಕಾರದ ಶ್ರೇಷ್ಠ ವ್ಯಾಖ್ಯಾನ ರೂಪವಾಗಿ ಪ್ರಾದುರ್ಭವಿಸಿದುದು ಮತ್ತು ಪಠಿಸಲು ಪ್ರಶಸ್ತವಾದುದು ಎಂದೂ ಅರ್ಥವಿದೆ.

ಅಕಾರದ ವ್ಯಾಖ್ಯಾನ ರೂಪವಾಗಿರುವ ಈ ಸಮಸ್ತ ವಾಙ್ಮಯವು ಐದು ವಿಧ. ಮಿತ, ಅಮಿತ, ಸವರ, ಸತ್ಯ ಅನೃತ.

***ಮಿತ =*** ಉದಾತ್ತಾದಿ ಛಂದೋಬದ್ಧ ವಚನವಾದ ಋಕ್ ಸ್ವರ ಪೂರ್ವಾರ್ಧ – ಉತ್ತರಾರ್ಧ ಹೆಚ್ಚು ಕಡಮೆ ನಿಯಮವಿಲ್ಲದ ಛಂದೋಬದ್ಧ ವಚನವೆನಿಸಿದ ಗಾಥಾ, ಅಕ್ಷರ ಹೊಂದಿರುವ ಕುಂಭ್ಯಾ ಇವು ಮಿತಗಳು.

***ಅಮಿತಃ =*** ಯಜ್ಞಾಂಗ ವಾಕ್ಯ ರೂಪವಾದ ಯಜುಸ್‌ವಾದ ಸ್ತೋಭಾಕ್ಷರಗಳು ಅಮಿತಗಳು. ಅನ್ಯವಾಕ್ಯ ರೂಪವಾದ ನಿಗದ, ನಿರರ್ಥಕ ಶಬ್ಧರೂಪ.

***ಸ್ವರ =*** ಸಾಮ ಹಾಗೂ ಗಾನವು ಸ್ವರವೆನಿಸಿದರೆ, ಓಂಕಾರವೆ ಸತ್ಯವೆನಿಸುತ್ತದೆ ಎಂಬುದು ಅನೃತವು.

ಓಂಕಾರದಲ್ಲಿ ಅ, ಉ, ಮ ಎಂಬ ಮೂರು ಅಕ್ಷರಗಳಿದ್ದು ಅವುಗಳಲ್ಲಿ ಅಕಾರವು ತಪ್ಪದೆ ಮೊದಲಿಗೇ ಬರುತ್ತದೆ. ಆದ್ದರಿಂದ ಓಂಕಾರವು ಸತ್ಯ. ಅಕಾರವೆಂಬ ವೃಕ್ಷಕ್ಕೆ ಪುಷ್ಪ ಹಾಗೂ ಫಲದಂತಿರುವ ಉಕಾರ ಮಕಾರಗಳಿಂದ ಗರ್ಭಿತವಾಗಿದ್ದು, ಈ ಓಂ ಕಾರವು ಅಕಾರ ವೃಕ್ಷದ ಪುಷ್ಪಫಲಾತ್ಮಕವಾಗಿದೆ. ಅಕಾರ ವೃಕ್ಷದ ಪುಷ್ಪಫಲಾತ್ಮಕವಾದ ಈ ಓಂಕಾರವನ್ನು ಓಂ ಆಗಲಿ, ಕೊಡುತ್ತೇನೆ ಎಂದು ಯಾಚಕರ ಮುಂದೆ ಉಚ್ಚರಿಸುವವನು ಪ್ರಖ್ಯಾತಿ ಹೊಂದುತ್ತಾನೆ. ಒಳ್ಳೆಯ ಪ್ರಶಂಸೆಗೂ ಪಾತ್ರನಾಗುತ್ತಾನೆ. ಮುಕ್ತಿ ಹೊಂದಲು ಸಮರ್ಥನೂ ಆಗುತ್ತಾನೆ. ಆದ್ದರಿಂದಲೂ ಓಂಕಾರವು ಸತ್ಯ.

ನ ಕಾರದಲ್ಲಿ ಅ ಕಾರ ಕೊನೆಯಲ್ಲಿ ಬರುತ್ತದೆ. ಆದ್ದರಿಂದ ಅದು ಅನೃತ. ಆಧರೂ ಅಕಾರದ ಒಂದು ಅಂಶವನ್ನು ನಿಷೇಧವನ್ನು ಹೇಳುವುದರಿಂದ ಅ ಕಾರವೆಂಬ ವೃಕ್ಷದ ಬೇರಿನಂತಿದೆ. ಬೇರು ಮೇಲೆ ಬಂದರೆ ಮರ ಒಣಗುತ್ತದೆ ಬೀಳುತ್ತದೆ. ಹಾಗೆಯೇ ಯೋಗ್ಯರು ವಿದ್ಯೆಯನ್ನೋ ಧನವನ್ನೋ ಬೇಡಿಬಂದಾಗ ನ ಎನ್ನುವನು ಕೀರ್ತಿ ಪ್ರಶಂಸೆ ಮುಂತಾದ ಫಲಗಳನ್ನು ಹೊಂದದೆ ಐಶ್ವರ್ಯ ವಿದ್ಯೆ ಮುಂತಾದವುಗಳಲ್ಲಿ ಕ್ಷೀಣಿಸಿ ನರಕಾದಿ ಅನರ್ಥಗಳನ್ನು ಪಡೆಯುತ್ತಾನೆ. ಆದ್ದರಿಂದ ಯಾಚಕರಿಗೆ ನ ಎನ್ನಬಾರದು. ಅವರದಲ್ಲಿ ದಯೆ ತೋರಬೇಕು.

ಬೇಡಿದವರಿಗೆ ಎಲ್ಲರಿಗೂ ಓಂ ಆಗಲಿ ಕೊಡುತ್ತೇನೆ ಎಂದೆನ್ನುವುದು ದಾರಿದ್ರ್ಯಕ್ಕೆ ಕಾರಣವಾಗುವುದು. ಅಯೋಗ್ಯರಿಗೆ ಓಂ ಎಂದು ಹೇಳಿದರೇ ಸಾಕು ಜ್ಞಾನ ಐಶ್ವರ್ಯಾದಿಗಳು ನಶಿಸುವುವು. ಯೋಗ್ಯರು ಅಯೋಗ್ಯರೆನ್ನದೆ ಎಲ್ಲರಿಗೂ ತನ್ನಲ್ಲಿರುವುದನ್ನು ಕೊಟ್ಟರೆ ಇನ್ನೇನು ಹೇಳಬೇಕು? ಅವನು ದರಿದ್ರನಾಗುತ್ತಾನೆ. ಮಾತ್ರವಲ್ಲ ತಾನು ಬಯಸಿದುದೇನನ್ನೂ ಹೊಂದಲಾರ. ಆದ್ದರಿಂದ ಅಯೋಗ್ಯರಿಗೆ ನ ಎನ್ನುವುದೇ ತನ್ನ ಜ್ಞಾನಾಭಿವೃದ್ಧಿಗೆ ಕಾರಣವಾಗುತ್ತದೆ.

ಯೋಗ್ಯರು ಅಯೋಗ್ಯರು ಎಂದು ನೋಡದೆ ಎಲ್ಲರಿಗೂ ನ ಎನ್ನುವದೂ ಸರಿಯಲ್ಲ. ಅಪಕೀರ್ತಿಯುಂಟಾಗುತ್ತದೆ. ಅಪಕೀರ್ತಿ ಅವನನ್ನು ಕೂಡಲೇ ಮೃತಪ್ರಾಯನನ್ನಾಗಿ ಮಾಡುತ್ತದೆ. ಆದ್ದರಿಂದ ಯೋಗ್ಯ ಕಾಲದಲ್ಲಿ ಯೋಗ್ಯರಿಗೇ ದಾನ ಮಾಡಬೇಕು. ಯೋಗ್ಯ ಕಾಲದಲ್ಲಿ ಅಯೋಗ್ಯರಿಗೆ ದಾನ ಮಾಡಕೂಡದು. ಆದ್ದರಿಂದ ವಿವೇಕಿಯಾದವನು ಓಂ ಕಾರವನ್ನು ನ ಕಾರವನ್ನೂ ಕಾಲಕ್ಕೆ ಪಾತ್ರಕ್ಕೆ ಅನುಸಾರವಾಗಿ ಜೊತೆಗೂಡಿಸಿಕೊಳ್ಳಬೇಕು. ಅವು ಜೊತೆಗೂಡುವುದರಿಂದ ಈತ ಸುಖಿಯಾಗುತ್ತಾನೆ. ಹೀಗೆ ಅ ಕಾರವನ್ನು ತಿಳಿಯುವವನು ಜ್ಞಾನಿಯು.

ಹೀಗೆ ಅ ಕಾರವು ಪ್ರಭುವಾದ ವಿಷ್ಣುವಿನ ಎಲ್ಲ ಗುಣಗಳನ್ನು ಹೇಳುವುದರಿಂದ ಅದರ ವ್ಯಾಖ್ಯಾನ ರೂಪವಾದ ಎಲ್ಲ ಶಬ್ದಗಳೂ ವಿಷ್ಣುವಿನ ಗುಣಗಳನ್ನೇ ಹೇಳುವವುಗಳು ಎಂದ ಮೇಲೆ ಬೃಹತೀ ಸಹಸ್ರವೂ ಹಾಗೆಯೇ ಎಂದು ಬೇರೆ ಹೇಳಬೇಕಾಗಿಲ್ಲ.

### *18. ಬೃಹತೀ ಸಹಸ್ರವು ಹರಿಗೆ ಅತ್ಯಂತ ಪ್ರೀತಿಕರಃ :*

ವಿಶೇಷವಾಗಿ ಅ ಕಾರಕ್ಕೆ ಬೃಹತೀ ಸಹಸ್ರವೇ ವ್ಯಾಖ್ಯಾನ. ಆದ್ದರಿಂದ ಇದರ ಪಠನದಿಂದ ವಿಷ್ಣು ಸದಾ ಪ್ರಸನ್ನನಾಗುತ್ತಾನೆ. ಆದ್ದರಿಂದ

ಯಜ್ಞದಲ್ಲಾಗಲೀ ಬೇರೆ ಸಂದರ್ಭದಲ್ಲಾಗಲೀ ನಾರಾಯಣ ದೇವನನ್ನು ಧ್ಯಾನಿಸಿ ಪಠಿಸಬೇಕು. ಅದು ವಿಷ್ಣುವಿಗೆ ಅತ್ಯಂತ ಪ್ರೀತಿಕರ ಎಂದು ಮುಂತಾಗಿ ಬ್ರಹ್ಮಸಾರದಲ್ಲಿ ಹೇಳಿದೆ.

## *19. ಬೃಹತೀ ಸಹಸ್ರ – ಮಾನವನ ಆಯುಷ್ಯಃ :*

ಹೀಗೆ ಸಿದ್ಧವಾದ ಬೃಹತೀ ಸಹಸ್ರದಲ್ಲಿ ಮೂವತ್ತಾರು ಸಾವಿರ ವ್ಯಂಜನಾಕ್ಷರಗಳಿವೆ. ಅವುಗಳಲ್ಲಿ ಮೂವತ್ತಾರು ಸಾವಿರ ಭಗವಂತನ ಸ್ತ್ರೀರೂಪಗಳಿವೆ. ಮೂವತ್ತಾರು ಸಾವಿರ ಸ್ವರಾಕ್ಷರಗಳಿವೆ. ಅವುಗಳಲ್ಲಿ ಭಗವಂತನ ಪುರುಷ ರೂಪಗಳಿವೆ. ಮಾನವನ ಪೂರ್ಣಾಯುಷ್ಯದಲ್ಲಿ ಹಗಲು-ರಾತ್ರಿಗಳೆಡೂ ಪ್ರತ್ಯೇಕವಾಗಿ ಮುವತ್ತಾರು ಸಾವಿರ ಇದೆ. ದಿನಗಳ ಅಭಿಮಾನಿಯಾದ ಸೂರ್ಯನಲ್ಲಿಯೂ ಪರಮಾತ್ಮನ ಸ್ತ್ರೀ-ರೂಪಗಳು ಪ್ರತ್ಯೇಕವಾಗಿ ಮೂವತ್ತಾರು ಸಾವಿರ ಇದೆ. ಮುಖ್ಯಪ್ರಾಣನನ್ನು ಹುಟ್ಟಿಸುವ ಇಚ್ಛೆಯಿಂದ ರಮಾದೇವಿಯಲ್ಲಿರುವ ತನ್ನ ಸ್ತ್ರೀರೂಪದೊಡನೆ ರಮಿಸುವ ಶ್ರೀಹರಿ ಬೃಹತೀಸಹಸ್ರವನ್ನು ಪಠಿಸುವ ಜೀವನ ವ್ಯಂಜನಾಕ್ಷರಗಳಲ್ಲಿರುವ ಸ್ತ್ರೀರೂಪಗಳಿಂದ ಆ ಜೀವನ ಹಗಲುಗಳಲ್ಲಿರುವ ಪುರುಷ ರೂಪಗಳನ್ನು ಕೂಡಿಕೊಳ್ಳುತ್ತಾನೆ. ಹಾಗೆಯೇ ಜೀವನ ಸ್ವರಾಕ್ಷರಗಳಲ್ಲಿರುವ ಪುರುಷ ರೂಪಗಳಿಂದ ಜೀವನ ರಾತ್ರಿಗಳಲ್ಲಿರುವ ಸ್ತ್ರೀರೂಪಗಳನ್ನು ಕೂಡಿಕೊಳ್ಳುತ್ತಾನೆ. ಕೆಲವೊಮ್ಮೆ ಜೀವನ ಹಗಲುಗಳಲ್ಲಿರುವ ಪುರುಷ ರೂಪಗಳಿಂದ ಜೀವನ ವ್ಯಂಜನಾಕ್ಷರ-ಗಳಲ್ಲಿರುವ ಸ್ತ್ರೀರೂಪಗಳನ್ನು ಕೂಡಿಕೊಳ್ಳುತ್ತಾನೆ. ಹಾಗೆಯೇ ಜೀವನ ರಾತ್ರಿಗಳಲ್ಲಿರುವ ಸ್ತ್ರೀರೂಪಗಳಿಂದ ಜೀವನ ಸ್ವರಾಕ್ಷರಗಳಲ್ಲಿರುವ ಪುರುಷ ರೂಪಗಳನ್ನು ಕೂಡಿಕೊಳ್ಳುತ್ತಾನೆ.

## *20. ಬೃಹತೀ ಸಹಸ್ರ ಪಠನ ಫಲಃ :*

ತೇನೇಂದ್ರಸ್ಯ ಪ್ರಿಯಂ ಧಾಮೋಪೇಯಾಯ ಎಂಬಲ್ಲಿ ಮುನಿಯು ಇಂದ್ರನ ಪ್ರಿಯವಾದ ಲೋಕವನ್ನು ಹೊಂದಿದನು ಎಂದರ್ಥವಲ್ಲ. ಉಪೇಯಾಯ ಎಂಬಲ್ಲಿ ಉಪಶಬ್ಧವಿದೆ.

ಬೃಹತೀ ಛಂದಸ್ಸಿನ ಸಾವಿರ ಋಚೆಗಳನ್ನು ಸಂಗ್ರಹಿಸಿಪಡಿಸುವುದರಿಂದ ಮುಕ್ತನಾಗಲು ಸಮರ್ಥನಾಗುತ್ತಾನೆ, ಪ್ರಸಿದ್ಧನಾಗುತ್ತಾನೆ. ಒಳ್ಳೆಯ ಕೀರ್ತಿವಂತನೂ ಆಗುತ್ತಾನೆ ಸ್ವಚ್ಛಂದ ಮೃತ್ಯುವೂ ಆಗುತ್ತಾನೆ. ಮುಕ್ತಿಯಲ್ಲಿ ಗುಣದಿಂದ ಪೂರ್ಣನೂ ಆಗುತ್ತಾನೆ ಎಂದು ಮಹಿದಾಸ ನಾಮಕನಾದ ಪ್ರಭು ವಿಷ್ಣುವು ಸ್ವಯಂ ಹೇಳಿದ್ದಾನೆ ಎಂದು ಮುಂತಾಗಿಯೂ ಹೇಳಿದೆ.

## 21. ಬೃಹತೀಸಹಸ್ರ – ಗಾಯತ್ರೀ ಮಂತ್ರ ವಿಷ್ಣುಸಹಸ್ರನಾಮಗಳ ಸಮನ್ವಯ:

**ಓಂ 'ಅಂ' ಅಜಾಯನಮಃ**

51 ಅಕ್ಷರಗಳಿಂದ ಕೂಡಿದ ಮಾತೃಕಾಮಂತ್ರದಿಂದ ಪ್ರತಿಯೊಂದು ಅಕ್ಷರವೂ ವಿಷ್ಣು ಸಹಸ್ರನಾಮದ 20. 20 ನಾಮಗಳನ್ನು ಒಳಗೊಂಡಿದೆ. ಅಂದರೆ ಈ 51 ಅಕ್ಷರಗಳೂ ವೃತ್ತಾಕಾರವಾಗಿ ಹೃತ್ಕಮಲ-ದಲ್ಲಿರುವುದರಿಂದ 3600 ಡಿಗ್ರಿಗಳನ್ನು ಪ್ರತಿಬಿಂಬಸುತ್ತವೆ ಅಂದ ಮೇಲೆ – ಈ 51 ಅಕ್ಷರಗಳೂ ಗಾಯತ್ರಿ ಮಂತ್ರದ 3 ಪಾದಗಳು –

ಬ್ರಹ್ಮಾ ತತ್ಸವಿತುರೇಣೀಯಂ – 1 ನೇ ಪಾದ

ಗಾಯತ್ರೀ ಭರ್ಗೋದೇವಸ್ಯಧೀಮಹಿ – 2ನೇ ಪಾದ

ಮಂತ್ರ ಧಿಯೋಯೋನಃ ಪ್ರಚೋದಯಾತ್ – 3ನೇ ಪಾದ

ಒಂದೊಂದು ಪಾದವೂ ವೃತ್ತಾಕರದ 1200 ಡಿಗ್ರಿಯಲ್ಲಿ ಅಡಕವಾಗಿರುತ್ತದೆ. ಒಂದೊಂದು ವರ್ಣವು 15° ಡಿಗ್ರಿಯ ವ್ಯಾಪ್ತಿಯಲ್ಲಿರುತ್ತದೆ. ಮಾತೃಕಾ ಮಂತ್ರದ ವರ್ಣಗಳು 120° ಡಿಗ್ರಿಯಲ್ಲಿರುವುದರಿಂದ ಒಂದೊಂದು ವರ್ಣ 7°-3'-2"1 (2"8/19) ಆಗುವುದರಿಂದ 1/2 ಕ್ಕೆ ಕಡಿಮೆ. ಆದ್ದರಿಂದ ಒಂದು ರಾಶಿಯು 30 ಡಿಗ್ರಿಯ ವ್ಯಾಪ್ತಿಯಲ್ಲಿರುತ್ತದೆ.

ಒಂದು ರಾಶಿಗೆ 2 $^1/_4$ ನಕ್ಷತ್ರ ಅಂದರೆ – 9 ಪಾದ – 1 ಪಾದಕ್ಕೆ 30°/ 9–3°–20' ಆಗುತ್ತದೆ. ಆದ್ದರಿಂದ, ಯಾವ ಯಾವ ಮನುಷ್ಯ ಯಾವ ಯಾವ ನಕ್ಷತ್ರದ ಪಾದದಲ್ಲಿ ಹುಟ್ಟಿರುತ್ತಾನೆಯೋ, ಆ ಪಾದಕ್ಕೆ ಅನುಗುಣವಾದ ಭಗವದ್ರೂಪದಿಂದ ಸ್ತೋತ್ರ ಮಾಡಿದಲ್ಲಿ ಪರಮಾತ್ಮನು ಸುಪ್ರೀತನಾಗಿ, ಜೀವರುಗಳ ಸಕಲಾನಿಷ್ಟ ನಿವಾರಣ ದ್ವಾರಾ-ಸಕಲಾಭೀಷ್ಟವನ್ನು ಅನುಗ್ರಹಿಸುತ್ತಾನೆಯಾದ್ದರಿಂದ, ಆಯಾವರ್ಣಾಭಿಮಾನಿ ದೇವತೆಯಲ್ಲಿರತಕ್ಕ ದೇವರನ್ನು ಸ್ತೋತ್ರ ಮಾಡುವ ಕ್ರಮವನ್ನು ಮೂರು ಅಧಿಷ್ಠಾನಗಳಲ್ಲಿ ಹೇಳಲ್ಪಟ್ಟಿದೆ. ಅವು ಯಾವುವೆಂದರೆ-

1) ಪ್ರತಿಮಾಧಿಷ್ಠಾನ, 2) ಅಗ್ನ್ಯಧಿಷ್ಠಾನ ಮತ್ತು 3) ಬ್ರಾಹ್ಮಣಾಧಿಷ್ಠಾನ.

ಈ ಮೂರು ಕ್ರಮದಿಂದ ಭಗವಂತನನ್ನು ಸ್ತೋತ್ರ ಮಾಡಬೇಕು. ಉದಾಹರಣೆ –

ಅಂ ಅಜಾಯನಮಃ – ಎಂಬ ವರ್ಣ ರೂಪವಾದ ಭಗವಂತನು ಕಾಲಚಕ್ರದಲ್ಲಿ 3–20ನೇ ಅಂಶದಿಂದ ಪ್ರತಿಪದಿಸಲ್ಪಟ್ಟಿರುವನು. ಈ

ವರ್ಣವು ಮಾತೃಕಾ ಮಂತ್ರದ ಮೊದಲನೇ ಅಕ್ಷರವಾದುದರಿಂದಲೂ – ಕಾಲಚಕ್ರದ ರಾಶಿಯು ಮೇಷದಿಮದ ಪ್ರಾರಂಭಿಸಲ್ಪಟ್ಟಿರುತ್ತದೆ. ಅಂದ ಮೇಲೆ ಅಂ ಅಜ ಶಬ್ದ ವಾಚ್ಯಪರಮಾತ್ಮನು ಮೇಷ ರಾಶಿ ಪ್ರತಿಪಾದ್ಯನಾಗುತ್ತಾನೆ.

ಅಕಾರ – ತ್ರಿಪದಾಗಾಯತ್ರೀ – ಗಾಯತ್ರೀಗೆ ಮೂರು ಪಾದಗಳು – ಒಂದೊಂದು ಪಾದವೂ 120° – (ಡಿಗ್ರಿ) ಇದಕ್ಕೆ ಸರಿಯಾಗಿ ಮಾತೃಕಾಮಂತ್ರಾಕ್ಷರಗಳು 51ಕ್ಕೆ –3 ಪಾದ ಎಂದರೆ ಒಂದೊಂದು ಪಾದಕ್ಕೆ 17 ಅಕ್ಷರಗಳು ಒಂದೊಂದು ಪಾದಕ್ಕೂ 4 ರಾಶಿಗಳು.

*1 ನೇ ಪಾದಕ್ಕೆ – ತತ್ಸವಿತುವರೇಣೀಯಂ*

*(1) ಅಕ್ಷರಗಳು = ಅ, ಆ, ಇ, ಉ, ಊ, ಋ, ೠ, ಌ, ೡ, ಏ, ಐ, ಓ, ಔ, ಅಂ, ಅಃ ಮತ್ತು ಕ (ಕ ವರ್ಗದ ಮೊದಲನೇ ಅಕ್ಷರ) 17*

| | ರಾಶಿ | ನಕ್ಷತ್ರ | ಪಾದ |
|---|---|---|---|
| (2) ರಾಶಿಗಳು | 1) ಮೇಷ | ಅಶ್ವಿನಿ – 4 | |
| | | ಭರಣಿ – 4 | 9 |
| | | ಕೃತ್ತಿಕ – 1 | |
| | 2) ವೃಷಭ | ಕೃತ್ತಿಕ – 3 | |
| | | ರೋಹಿಣಿ – 4 | 9 |
| | | ಮೃಗಶಿರ – 2 | |
| | 3) ಮಿಥುನ | ಮೃಗಶಿರ – 2 | |
| | | ಅರಿದ್ರ – 4 | 9 |
| | | ಪುನರ್ವಸು – 3 | |
| | 4) ಕರ್ಕಾಟಕ | ಪುನರ್ವಸು – 1 | |
| | | ಪುಷ್ಯ – 4 | 9 |
| | | ಅಶ್ಲೇಷ – 4 | |
| | | ಒಟ್ಟು | 36 |

***2ನೇ ಪಾದಕ್ಕೆ - ಭರ್ಗೋದೇವಸ್ಯಧೀಮಹಿ***

***(1) ಅಕ್ಷರಗಳು - ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಡ, ಢ, ಣ, ತ, ಥ ಮತ್ತು ದ 17***

| (2) ರಾಶಿಗಳು | 5) ಸಿಂಹ | ಮಖ - 4 | |
|---|---|---|---|
| | | ಪುಬ್ಬ - 4 | 9 |
| | | ಉತ್ತರ - 1 | |
| | 6) ಕನ್ಯಾ | ಉತ್ತರ - 3 | |
| | | ಹಸ್ತ - 4 | 9 |
| | | ಚಿತ್ತ - 2 | |
| | 7) ತುಲಾ | ಚಿತ್ತ - 2 | |
| | | ಸ್ವಾತಿ - 4 | 9 |
| | | ವಿಶಾಖ - 3 | |
| | 8) ವೃಶ್ಚಿಕ | ವಿಶಾಖ - 1 | |
| | | ಅನುರಾಧ - 4 | 9 |
| | | ಜ್ಯೇಷ್ಠ - 4 | |
| | | ಒಟ್ಟು | 36 |

***3ನೇ ಪಾದಕ್ಕೆ ಧಿಯೋಯೋನಃ ಪ್ರಚೋದಯಾತ್***

***(1) ಅಕ್ಷರಗಳು - ಧ, ನ, ಪ, ಫ, ಬ, ಭ, ಮ, ಯ, ರ, ಲ, ವ,ಶ, ಷ, ಸ, ಹ, ಳ ಮತ್ತು ಕ್ಷ 17***

| (2) ರಾಶಿಗಳು | 9) ಧನುಸ್ಸು | ಮೂಲ - 4 | |
|---|---|---|---|
| | | ಪೂರ್ವಾಷಾಡ-4 | 9 |
| | | ಉತ್ತರಾಷಾಡ - 1 | |
| | 10) ಮಕರ | ಉತ್ತರಾಷಾಡ - 3 | |
| | | ಶ್ರವಣ - 4 | 9 |
| | | ಧನಿಷ್ಠ - 2 | |

| | | |
|---|---|---|
| 11) ಕುಂಭ | ಧನಿಷ್ಠ – 2 | |
| | ಶತಭಿಷ – 4 | 9 |
| | ಪೂರ್ವಾಭಾದ್ರ – 3 | |
| 12) ಮೀನ | ಪೂರ್ವಾಭಾದ್ರ – 1 | |
| | ಉತ್ತರಾಭಾದ್ರ – 4 | 9 |
| | ರೇವತಿ – 4 | |
| | ಒಟ್ಟು | 36 |

ಒಟ್ಟಾಗಿ ಮೂರು ಪಾದಗಳಂದ 108

ಆಯಾ ರಾಶಿಗಳಗೆ ಹೊಂದುವ ನಕ್ಷತ್ರಗಳು ಹಾಗೂ ಗಾಯತ್ರೀ ಪ್ರತಿಪಾದ್ಯವರ್ಣ, ತದ್ವಣಾಭಿಮಾನಿ ದೇವತೆಗಳು ಮತ್ತು ವಿಶೇಷ ಬೃಹತೀಸಹಸ್ರ ಖುಕ್ಕುಗಳು ವಿಷ್ಣು ಸಹಸ್ರನಾಮದ ಅನ್ವಯ –

ಉದಾ : ಒಬ್ಬ ವ್ಯಕ್ತಿ ಅಶ್ವಿನೀ ನಕ್ಷತ್ರದಲ್ಲಿ ಜನಿಸಿದ್ದರೆ, ಮೇಷ ರಾಶಿ, ಗಾಯತ್ರಿಪ್ರತಿಪಾದ್ಯವರ್ಣಾಭಿಮಾನಿ, ಭಗವದ್ರೂಪ ಮತ್ತು ಸ್ತ್ರೀರೂಪ ಹಾಗೂ ಅವರ್ಣಾಭಿಮಾನಿಗಳಗೆ ಹೊಂದತಕ್ಕ ವಿಷ್ಣುಸಹಸ್ರನಾಮ ಮತ್ತು ಬೃಹತೀಸಹಸ್ರ ಖುಕ್ಕುಗಳು (ಅರ್ಥಸಹಿತ) ಈ ಭಗವದ್ರೂಪಗಳನ್ನು ಚಿಂತನೆ ಮಾಡಿದಲ್ಲಿ – ಆಯಾ ವ್ಯಕ್ತಿಯ ಬಿಂಬರೂಪಿ ಪರಮಾತ್ಮನ ಅನುಗ್ರಹ ಪಡೆದು ಸದ್ಗತಿಯನ್ನು ಹೊಂದಬಹುದು. ಅಂದ ಮೇಲೆ, ಅಶ್ವಿನೀ ನಕ್ಷತ್ರದಲ್ಲಿ ಜನಿಸಿದ ವ್ಯಕ್ತಿಯು ಪಾದ ವ್ಯತ್ಯಾಸದಿಂದ ತನ್ನ ಬಿಂಬರೂಪಿ ಭಗವದ್ರೂಪ ಚಿಂತನೆಯಿಂದ ಸಂಸಾರ ಚಕ್ರವನ್ನು ಸುಲಭವಾದ ರೀತಿಯಲ್ಲಿ ದಾಟಬಹುದಾಗಿದೆ.

ಉದಾ : ಮೇಷ ರಾಶಿ 1ನೇ ಪಾದದ ವ್ಯಕ್ತಿಯ ಭಗವದ್ರೂಪಗಳು ಗಾಯತ್ರೀ ಪ್ರತಿಪಾದ್ಯವರ್ಣ – ಓಂ ತತ್ ತ ಕಾರವು ವರ್ಣಮಾಲೆಯ 32 ನೇ ವರ್ಣವಾಗಿರುತ್ತದೆ. ಗಾಯತ್ರೀ ಮಂತ್ರದ ಮೊದಲನೇ ಪಾದದಲ್ಲಿ ವರ್ಣಮಾಲೆಯ 17 ಅಕ್ಷರಗಳೂ ಸೇರಿ 51 ಅಕ್ಷರಗಳು ಹೊಂದಿಕೊಂಡಿರುತ್ತವೆ.

ಗಾಯತ್ರಿ ಮೊದಲನೇ ಪಾದದಲ್ಲಿ – ಅಕಾರದಿಂದ ಕ ಕಾರದ ಮೊದಲನೇ ಅಕ್ಷರ – 1 ಪಾದ

ಗಾಯತ್ರೀ ಎರಡನೇ ಪಾದದಲ್ಲಿ – ಖ ಕಾರದಿಂದ ತ ಕಾರದ ವರ್ಣದವರೆಗೂ – 2 ನೇ ಪಾದ

ಗಾಯತ್ರೀ ಮೂರನೇ ಪಾದದಲ್ಲಿ – ಧ ಕಾರದಿಂದ ಕ್ಷ ಕಾರದ ಪರ್ಯಂತರ 3ನೇ ಪಾದ

51 ಅಕ್ಷರಗಳೂ ಹೊಂದಿಕೊಂಡು ಆಯಾ ವರ್ಣ ಪ್ರತಿಪಾದ್ಯ ವರ್ಣಾಭಿಮಾನಿ ದೇವತೆಗಳು ಅದಕ್ಕೆ ಸರಿ ಹೊಂದುವ ವಿಷ್ಣು ಸಹಸ್ರನಾಮ ಹಾಗೂ ಬೃಹತೀಸಹಸ್ರ ಋಕ್ಕುಗಳು.

**22. *ಬೃಹತೀ ಹಾಗೂ ಪಂಚಾಶತ್ ವರ್ಣಗಳು :***

ಬೃಹತೀಸಹಸ್ರವು ಬೃಹತೀ ಛಂದಸ್ಸಿನಿಂದ ಕೂಡಿ 36 ಅಕ್ಷರಗಳು ವಿಷ್ಣು ಸಹಸ್ರನಾಮ - 1000 ನಾಮಗಳು 51 ಅಕ್ಷರಗಳಿಗೆ ಹೊಂದಿಸಲು ಒಂದೊಂದು ವರ್ಣಕ್ಕೆ 20 ವಿಷ್ಣು ಸಹಸ್ರನಾಮದಂತೆ 50 ವರ್ಣಗಳಿಗೆ 1000 ನಾಮಗಳಾಗುತ್ತದೆ ಮತ್ತು 51ನೇ ಅಕ್ಷರವು ನಾಲ್ಕು ವೇದಗಳನ್ನು ಮತ್ತು ಪುರುಷ ಸೂಕ್ತ (ಋಗ್ವೇದ) 16 ಋಕ್ಕುಗಳು ಸೇರಿ 20 ಭಗವದ್ರೂಪಗಳು ವಿಷ್ಣು ಸಹಸ್ರನಾಮ ಹೊರತುಪಡಿಸಿ ಆಗುತ್ತದೆ.

ಐವತ್ತೊಂದನೆಯ (51) ಸಂಯುಕ್ತಾಕ್ಷರದ ಕ್ಷ ಕಾರ ಪ್ರತಿಪಾದ್ಯ ಶ್ರೀನೃಸಿಂಹ ದೇವರ ಮೂರ್ತಿಯಿಂದ ಪೂರ್ಣಗೊಳ್ಳುತ್ತದೆ. ನೃಸಿಂಹರೂಪೀ ಪರಮಾತ್ಮನಲು ದುರಿತನಿವಾರಕನಾದುದರಿಂದ, ನಿತ್ಯವೂ ವಿಷ್ಣುಸಹಸ್ರನಾಮದಿಂದ ಪರಮಾತ್ಮನನ್ನು ಸ್ತೋತ್ರ ಮಾಡಿದಲ್ಲಿ ಸಕಲದುರಿತಗಳು ನಾಶವಾಗುತ್ತವೆಯಾದುದರಿಂದ - ಈ ವಿಷ್ಣು ಸಹಸ್ರನಾಮಸ್ತುತಿಯನ್ನು ಪ್ರತಿನಿತ್ಯದಲ್ಲೂ ಮಾಡುವುದು.

ಇಂತಹ ಬೃಹತೀಸಹಸ್ರವನ್ನು ನಮ್ಮ ಪ್ರಿಯಶಿಷ್ಯರಾದ ಚತುರ್ವೇದಿ ವೇದವ್ಯಾಸಾಚಾರ್ಯರು ಸಜ್ಜನ ಸಮಾಜಕ್ಕೆ ನೀಡಿರುವುದು ಅಭಿಮಾನದ ಸಂಗತಿ. ಮನೆಯಲ್ಲಿ ಪಾಠ ಪ್ರವಚನ - ಗ್ರಂಥ ಬರೆಯುವುದು - ಪೌರೋಹಿತ್ಯ - ಹೀಗೆ ಅನೇಕ ರೀತಿಯಿಂದ ತಮ್ಮನ್ನು ಸಮಾಜಕ್ಕೆ ತೊಡಗಿಸಿಕೊಂಡಿರುವ ನಮ್ಮ 'ವೇದು' - ಪವಮಾನಸೂಕ್ತ ವ್ಯಾಖ್ಯಾನ, ಶ್ರೀನಿವಾಸಕಲ್ಯಾಣದಂತಹ ಅಪೂರ್ವ ಗ್ರಂಥಗಳನ್ನು ರಚಿಸಿ ಹರಿ-ವಾಯು ಸೇವೆ ಮಾಡಿರುತ್ತಾರೆ. ಇವರಿಂದ ಸಂಪಾದನೆಗೊಂಡ ಬೃಹತೀಸಹಸ್ರ ನಮಗೆ ಅತ್ಯಂತ ಪ್ರಿಯವಾಗಿದ್ದು ಅದನ್ನು ಸ್ವರಸಹಿತ ಹೋಮಾಂಗ ವಿಧಿ ಸಹಿತ ಬಹಳ ಶ್ರಮವಹಿಸಿ ಸಮಾಜಕ್ಕೆ ನೀಡಿದ್ದಾರೆ. ಇವರಿಂದ ಇನ್ನೂ ಅನೇಕ ಗ್ರಂಥಗಳು ಹೊರಬರಲಿ ಎಂದು ನಮ್ಮ ಉಪಾಸ್ಯಮೂರ್ತಿ ಹಯವದನ - ರಂಗವಿಠಲ - ಗೋಪೀನಾಥ ದೇವರನ್ನು ಪ್ರಾರ್ಥಿಸುತ್ತಾ,

ಇತಿ ನಾರಾಯಣ ಸ್ಮರಣೆಗಳು

ಶ್ರೀ ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರು

# ಸಂಗ್ರಹಕಾರರ ಮುನ್ನುಡಿ

ಬೃಹತೀಸಹಸ್ರವು ಭಗವಂತನಿಗೆ ಅತ್ಯಂತ ಪ್ರಿಯವಾದ ಅನ್ನವೆನಿಸಿದೆ. ***"ತದಿದಾಸ ವೆಂಬಲ್ಲಿಂದ ಏಷಸ್ತೋಮೋ"*** ಎಂಬಲ್ಲಿಗೆ 36 ಅಕ್ಷರಗಳಿಗೆ ನಿಲ್ಲಿಸುತ್ತಾ ಪಠಿಸಿದರೆ ಇಂತಹ ಬೃಹತೀ ಛಂದಸ್ಸುಳ್ಳ ಸಾವಿರ ಮಂತ್ರಗಳಾಗುತ್ತವೆ.

ಈ ಬೃಹತೀಸಹಸ್ರವು ಐದು ವಿಭಾಗಗಳನ್ನೊಳಗೊಂಡಿದೆ.

1–317 ಮಂತ್ರಗಳುಳ್ಳ ಪ್ರಥಮ ಭಾಗದಲ್ಲಿ, ನಾರಾಯಣನು ಈ ಮಂತ್ರಗಳಿಂದ ಪ್ರತಿಪಾದ್ಯನಾಗಿರುವನು.

318–473 ಮಂತ್ರಗಳುಳ್ಳ ಎರಡನೆಯದು ಗಾಯತ್ರತೃಚಾಶೀತಿ, ವಾಸುದೇವ ಪ್ರತಿಪಾದ್ಯ ದೇವತೆ

474–715 ಮಂತ್ರಗಳುಳ್ಳ ಮೂರನೆಯದು ಬಾರ್ಹತ ತೃಚಾಶೀತಿ, ಸಂಕರ್ಷಣ ಪ್ರತಿಪಾದ್ಯ ದೇವತೆ

716–897 ಮಂತ್ರಗಳುಳ್ಳ ನಾಲ್ಕನೆಯದು ಔಷ್ಣಿಹ್ ತೃಚಾಶೀತಿ, ಪ್ರದ್ಯುಮ್ನ ಪ್ರತಿಪಾದ್ಯ ದೇವತೆ

898–1000 ಮಂತ್ರಗಳುಳ್ಳ ಐದನೆಯದು ಉತ್ತರಭಾಗ ಅನಿರುದ್ಧನು ಪ್ರತಿಪಾದ್ಯ ದೇವತೆ

ಈ ಪಂಚರೂಪಗಳಲ್ಲದೆ ಮತ್ಸ್ಯಾದಿ ಪಂಚರೂಪಗಳು ಪ್ರತಿಪಾದ್ಯವಾಗಿದೆ. ಪ್ರಥಮಭಾಗದಿಂದ ಮತ್ಸ್ಯ–ಪರಶುರಾಮದೇವರು, ಗಾಯತ್ರ ತೃಚಾಶೀತಿಯದಿಂದ ಕೂರ್ಮ–ರಾಮರು, ಬಾರ್ಹತತೃಚಾಶೀತಿಯಿಂದ ವರಾಹ–ಕೃಷ್ಣರು, ಔಷ್ಣಿಹ್ ತೃಚಾಶೀತಿಯಿಂದ ನರಸಿಂಹ–ಬುದ್ಧರೂ, ಉತ್ತರಭಾಗದಿಂದ ವಾಮನ–ಕಲ್ಕಿ ಪ್ರತಿಪಾದ್ಯರಾಗಿರುವರು.

ವಸ್ತುತಃ ಬೃಹತಿಯಲ್ಲಿ 1135 ಋಕ್‌ಗಳು ಲಭಿಸುತ್ತವೆ. ಇವುಗಳೂ ಸಹ ಅನೇಕ ಛಂದಸ್ಸಿನಲ್ಲಿದೆ. ಆದರೂ ಅಕ್ಷರಗಳನ್ನು ಎಣಿಸಿದಾಗ ಕಂಪಸ್ವರಗಳೊಂದಿಗೆ ಸಂಧ್ಯಕ್ಷರಗಳಲ್ಲಿರುವ ಸ್ವರಾಕ್ಷರಗಳನ್ನು ಕೂಡಿಸಿದಾಗ 36 ಸಾವಿರ ಅಕ್ಷರಗಳಾಗುತ್ತವೆ.

***ಬೃಹತೀ–ವಿಷ್ಣು ಸಹಸ್ರನಾಮ :***

ಈ ಸಾವಿರ ಬೃಹತಿ ಮಂತ್ರಗಳು ಕ್ರಮವಾಗಿ ವಿಷ್ಣುಸಹಸ್ರನಾಮದ ವಿಶ್ವಾದಿ ರೂಪಗಳನ್ನು ವರ್ಣಿಸುತ್ತವೆ.

*ವಿಷ್ಣೋಃಸಹಸ್ರನಾಮ್ನಸ್ತು ಯದ್ಯದ್ ರೂಪಸಹಸ್ರಕಮ್ ।*
*ಬೃಹತೀಸಹಸ್ರಮೇತತ್ತು ತದ್ ವಕ್ತಿ ಹಿ ಪೃಥಕ್ ಪೃಥಕ್ ॥*

ಬೃಹತಿಯ ಮಂತ್ರಗಳೆಲ್ಲವೂ ವಿಶ್ವಾದಿ ನಾಮಗಳ ನಿವರ್ಚನ ಮಾಡುತ್ತವೆ.

ಬೃಹತಿಂಯಲ್ಲಿರುವ ಸ್ವರ-ವ್ಯಂಜನಗಳನ್ನು ಕೂಡಿಸಿದರೆ 72,000 ಅಕ್ಷರಗಳಾಗುತ್ತವೆ. ಇವುಗಳಲ್ಲಿ ಸ್ವರಾಕ್ಷರ ಪ್ರತಿಪಾದ್ಯಗಳಾದ ರೂಪಗಳು 36,000. ಪುರುಷರೂಪಗಳಾದರೆ ವ್ಯಂಜನ ಪ್ರತಿಪಾದ್ಯಗಳಾದ 36 ಸಾವಿರ ಸ್ತ್ರೀರೂಪಗಳಿರುತ್ತವೆ. ಒಟ್ಟು 72 ಸಾವಿರ ನಾಡಿಗಳಲ್ಲಿದ್ದು ಹಗಲು-ರಾತ್ರಿ ನಿಯಾಮಕವಾದ 72 ಸಾವಿರ ರೂಪಗಳು ಬೃಹತೀಯಲ್ಲಿರುವ ವರ್ಣಗಳಿಂದ ಪ್ರತಿಪಾದ್ಯಗಳಾಗಿವೆ.

### *ಬೃಹತೀ ಅಭಿಮಾನಿ ದೇವತೆ –*

ಬೃಹತೀಸಹಸ್ರಕ್ಕೆ ಮುಖ್ಯಾಭಿಮಾನಿನಿ ಲಕ್ಷ್ಮೀದೇವಿಯು, ವಿಶ್ವಾಮಿತ್ರರಿಂದ ನೋಡಲ್ಪಟ್ಟದ್ದರಿಂದ ವಿಶ್ವಾಮಿತ್ರರೆ ಋಷಿಯು, ಬೃಹತೀ ಸಹಸ್ರ ಮುಖ್ಯ ದೇವತೆಯು ನಾರಾಯಣನೇ. ತದನಂತರ ವಾಯುದೇವರು, ಇವರಿಬ್ಬರ ಆವೇಶವುಳ್ಳ ಇಂದ್ರದೇವರೂ ದೇವತೆಯೇ.

### *ಬೃಹತೀ ಸಹಸ್ರಾಕ್ಷರಗಳ ಸಂಪಾದನೆ –*

ಬೃಹತೀಯಲ್ಲಿ ಒಟ್ಟು ಋಕ್ಕುಗಳು 1135 ಇವೆ. ರಾಥಂತರ ಬಾರ್ಹತಗಳಲ್ಲಿರುವ ನಾಲ್ಕನ್ನು ಸೇರಿಸಿದರೆ 1139 ಋಕ್ಕುಗಳಾಗುತ್ತವೆ. ಇವುಗಳ ಅಕ್ಷರಗಣನೆ ಮಾಡಿದಾಗ 36000 ಅಕ್ಷರಗಳಿಗೆ 65 ಅಕ್ಷರಗಳು ಕಮ್ಮಿ ಬೀಳುತ್ತವೆ. ಅದನ್ನು ತುಂಬಿಸುವ ಮಾರ್ಗ ಹೀಗಿದೆ.

ಬೃಹತಿಯಲ್ಲಿ 52 ಕಂಪಸ್ವರಗಳಿವೆ. ಇವುಗಳಲ್ಲಿ 46 ಕಂಪಗಳು ಅಕ್ಷರ ಸ್ಥಾನದಲ್ಲಿವೆ. ಉಳಿದ ಆರು ಕಂಪಗಳು ಹನ್ನೆರಡು ಅಕ್ಷರ ಸ್ಥಾನದಲ್ಲಿರುತ್ತವೆ. ಒಟ್ಟು 58 ಅಕ್ಷರ ಲಭಿಸುತ್ತವೆ. ಸಂಧಿ ಮಾಡಿರುವಲ್ಲಿರುವ ಸ್ವರಾಕ್ಷರಗಳು ಏಳು ಒಟ್ಟು 65 ಅಕ್ಷರಗಳು.

### *ಬೃಹತೀ ಸಹಸ್ರ 72 ಸಾವಿರ ನಾಡಿಗಳು –*

ಬೃಹತೀ ಸಹಸ್ರದಲ್ಲಿ 36 ಸಾವಿರ ಸ್ವರ ಹಾಗೂ 36 ಸಾವಿರ ವ್ಯಂಜನಗಳಿದ್ದು ಭಗವಂತನ 72 ಸಾವಿರ ರೂಪಗಳಿವೆ. 36 ಸಾವಿರ ರೂಪಗಳು ಸ್ವರಾಕ್ಷರ ಪ್ರತಿಪಾದ್ಯವಾಗಿದ್ದು ಹಗಲನ್ನು ನಿಯಮಿಸುತ್ತವೆ. 36 ಸಾವಿರ ವ್ಯಂಜನ

ಪ್ರತಿಪಾದ್ಯಗಳಾಗಿದ್ದು ರಾತ್ರಿ ನಿಯಾಮಕಗಳಾಗಿವೆ. ನಮ್ಮ ಶರೀರದ ಬಲಭಾಗದಲ್ಲಿ 36 ಸಾವಿರ ನಾಡಿಗಳಿದ್ದು ಬೃಹತೀ ಸಹಸ್ರದ ಸ್ವರಾಕ್ಷರ ಪ್ರತಿಪಾದ್ಯಗಳಾದ 36 ಸಾವಿರ ರೂಪಗಳು ನಿಯಮಿಸುತ್ತವೆ. ಈ 72 ಸಾವಿರ ರೂಪಗಳೇ ಮಾನವ ಜೀವನದಲ್ಲಿರುವ 72,000 ಹಗಲು ರಾತ್ರಿಗಳ ನಿಯಾಮಕಗಳಾಗಿವೆ. ನಾವು ಮಾಡಿರುವ ಪುಣ್ಯ ಪಾಪಗಳು ನಮ್ಮ ದೇಹದ ನಾಡಿಗಳಲ್ಲಿರುತ್ತವೆ. ಬೃಹತೀ ಸಹಸ್ರ ಪಾರಾಯಣ – ಹೋಮ – ಪಾಠ – ಪ್ರವಚನಾದಿಗಳಿಂದ ನಾಡಿಯಲ್ಲಿರುವ ಭಗವಂತನ ಪ್ರೀತಿ ಸಂಪಾದಿಸಬಹುದು. ಇದರಿಂದ ನಾಡೀಗತ ಪಾಪಗಳು ಪರಿಹಾರವಾಗಿ ಆರೋಗ್ಯಾದಿಗಳು ಲಭಿಸುತ್ತದೆ. ನಮ್ಮ ದೇಹದಲ್ಲಿ 72 ಸಾವಿರ ನಾಡಿಗಳಿದ್ದು ಭಗವಂತನ 72 ಸಾವಿರ ರೂಪಗಳನ್ನು ಧರಿಸಿ ಈ ನಾಡಿಗಳಲ್ಲಿದ್ದು ನಮ್ಮ ದೇಹವನ್ನು ಸರ್ವದಾ ರಕ್ಷಿಸುತ್ತಿರುವನು. ನಮ್ಮ ಆಯುರ್ಮಾನ ಶತಂ ಜೀವ ಶರದಃ – ಎಂಬಂತೆ ನೂರು ವರ್ಷ. ಈ ನೂರು ವರ್ಷಗಳಲ್ಲಿ 36 ಸಾವಿರ ಹಗಲು, 36 ಸಾವಿರ ರಾತ್ರಿಗಳೂ ಇರುತ್ತವೆ. ಕೂಡಿಸಿದಾಗ 72 ಸಾವಿರ ಅಹೋರಾತ್ರಿಗಳಾಗುತ್ತವೆ. ಭಗವಂತನು ಸೂರ್ಯನಲ್ಲಿ 72 ಸಾವಿರ ರೂಪಗಳಿಂದ ಇದ್ದು ನಮ್ಮ ಆಯುರ್ಮಾನಗಳಾದ 72 ಸಾವಿರ ಹಗಲು–ರಾತ್ರಿಗಳನ್ನೂ ನಿಯಮನ ಮಾಡುತ್ತಾನೆ.

ಹೀಗೆ ನಮ್ಮ ದೇಹದ ನಾಡಿಗಳನ್ನು, ಮತ್ತು ನಮ್ಮ ಆಯುಸ್ಸಿನ 72 ಸಾವಿರ ಹಗಲು–ರಾತ್ರಿಗಳನ್ನು ಸೂರ್ಯನಲ್ಲಿದ್ದು ನಿಯಮನ ಮಾಡುತ್ತಿರುವ ಭಗವಂತನ 72 ಸಾವಿರ ರೂಪಗಳನ್ನು ಪ್ರತಿಪಾದಿಸುವ ಸಲುವಾಗಿಯೇ ಬೃಹತೀಸಹಸ್ರವೆಂಬ ಸ್ತೋತ್ರ ವಿಶೇಷವು ಹೊರಟಿದೆ.

ಈ ಬೃಹತೀ ಸಹಸ್ರದಲ್ಲಿಯೂ 36 ಅಕ್ಷರಗಳಿದ್ದು ಸ್ವರ– ವ್ಯಂಜನಗಳನ್ನು ಸೇರಿಸಿದರೆ 72 ಸಾವಿರವೆ ಆಗುವುದು. ಈ ನಾಡಿಗತ ಭಗವಂತನನ್ನು ಸ್ತುತಿಸಲು ಗಾಯತ್ರೀಮಂತ್ರ, ನಾರಾಯಣಾಷ್ಟಾಕ್ಷರ ಮಂತ್ರ, ವಾಸುದೇವ ದ್ವಾದಶಾಕ್ಷರ ಮಂತ್ರ, ಯತಿಗಳಿಗೆ ಓಂಕಾರವು ವಿಹಿತವಾಗಿವೆ. ಗಾಯತ್ರಿಯಲ್ಲಿ 24 ಅಕ್ಷರಗಳಿರುತ್ತವೆ. ಸಾವಿರದಂತೆ ಮೂರು ಹೊತ್ತು ಜಪಿಸಿದಾಗ 72 ಸಾವಿರವಾಗುತ್ತದೆ. 3000. x 24 = 72,000. ನಾರಾಯಣಾಷ್ಟಾಕ್ಷರ ಮಂತ್ರವನ್ನು ಗಾಯತ್ರಿಯ ಮೂರುಪಟ್ಟು ಜಪಿಸಬೇಕು. 8 x 3=24 = 3,000 = 72,000. ಓಂಕಾರದಲ್ಲಿ ಎಂಟು ಅಕ್ಷರಗಳು 8 x 3 ಹೊತ್ತು = 24. ಒಂದು ಹೊತ್ತಿಗೆ 1,000 ಜಪಿಸಬೇಕು. ಮೂರು ಹೊತ್ತಿಗೆ ಮೂರು ಸಾವಿರ 24 x 3,000 = 72,000.

ಹೀಗೆ ಬೃಹತೀಸಹಸ್ರವೆಂಬ ಶಂಸನ ಮಂತ್ರಗಳಿಂದಲೂ ಸ್ತುತಿಸಿ ಅವರ ಪ್ರೀತಿ ಸಂಪಾದಿಸಬಹುದು.

ಈ ಬೃಹತೀ ಸಹಸ್ರದ ಮೂಲ ಸ್ತೋತಸ್ಸು ವಿಷ್ಣುಸಹಸ್ರ ನಾಮ. ಒಂದು ಬಾರಿ ಸಹಸ್ರನಾಮ ಪಠಿಸಿದರೆ 72 ಸಾವಿರ ಭಗವದ್ರೂಪಗಳನ್ನು ಸ್ತುತಿಸಿದಂತಾಗುತ್ತದೆ. ಒಂದು ಬಾರಿ ಮಾಡಿದ ಸಹಸ್ರನಾಮ ಪಾರಾಯಣವು ನಮ್ಮ ಸಾವಿರ ತಪ್ಪುಗಳನ್ನು ಕ್ಷಮಿಸುತ್ತದೆ. ಅಂದ ಮೇಲೆ ಬೃಹತೀಸಹಸ್ರವೂ ಸಹ ಅದರ ವ್ಯಾಖ್ಯಾನವಾಗಿದ್ದು ಸಹಸ್ರನಾಮಗಳಲ್ಲಿರುವ ಅರ್ಥವೈಶದ್ಯ ತೋರಿಸುತ್ತಾ ಸಾವಿರಾರು ಪಾಪಗಳನ್ನು ಇಲ್ಲದಂತೆ ಮಾಡುವುದು ಅಚ್ಚರಿಯೇನಲ್ಲ.

ಗ್ರಹಗಳಲ್ಲಿ ಅತಿಕ್ರೂರನೆಂದು ಹೇಳಲ್ಪಟ್ಟ ಶನಿದೇವತೆಗೆ ವಿಷ್ಣುವೇ ದೇವತೆಯಾಗಿರುವನು. ಸಹಸ್ರನಾಮ ಅಥವಾ ಅದರ ವ್ಯಾಖ್ಯಾನವಾದ ಬೃಹತೀಸಹಸ್ರ ಪಾರಾಯಣಾದಿಗಳಿಂದ ವಿಷ್ಣುವನ್ನು ಸ್ತೋತ್ರ ಮಾಡಿದಾಗ ವಿಷ್ಣುವು ಸಂಪ್ರೀತನಾಗುವನು. ವಿಷ್ಣುವೆ ದೇವತೆಯಾಗಿವುಳ್ಳ ಶನಿದೇವನೂ ಪ್ರೀತಿನಾಗುವನು.

ವಿಷ್ಣುಸಹಸ್ರನಾಮವು ನಿರಂತರ ಶತಾರ್ಥಕಮ್ ಎಂಬಂತೆ ಒಂದೊಂದು ಪದಕ್ಕೆ ನೂರಾರು ಅರ್ಥಗಳಿದ್ದು, ಅದನ್ನು ವಿವರಿಸುವ ಬೃಹತೀಸಹಸ್ರನಾಮಕ್ಕೂ ನೂರಾರು ಅರ್ಥಗಳಿರುವುದು ಅಸಂಭವವೇನಲ್ಲ.

***ಬೃಹತೀ ಸಹಸ್ರ ಮೇತಚ್ಚ ತದ್‌ವಕ್ತಿ ಹಿ ಪೃಥಕ್ ಪೃಥಕ್***

ಬೃಹತೀ ಸಹಸ್ರವು, ಭಗವಂತನು ಎಷ್ಟು ರೂಪಗಳಿಂದ ಇರುವನೋ ಅಷ್ಟೂ ರೂಪಗಳನ್ನು ಪ್ರತಿಪಾದಿಸುತ್ತದೆ. ಭಗವಂತನು ಎಷ್ಟು ರೂಪಗಳಿಂದ ಇರುವನೋ ಅಷ್ಟನ್ನೂ ಬೃಹತೀಸಹಸ್ರವು ತಿಳಸುತ್ತದೆ ಎಂದು.

ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್ - ಎಂಬ ಶ್ರುತಿ ತಿಳಿಸಿದೆ. ಬೃಹತೀ ಸಹಸ್ರದ ನಾಮಗಳೊಂದಿಗೆ ಭಗವಂತನ ರೂಪಗಳೂ ಜೊತೆಗೆ ಇರುವುವು. ಆದ್ದರಿಂದಲೇ ಇದನ್ನು ***'ಸಹಸ್ರ'*** ಎನ್ನಲಾಗಿದೆ.

***'ಭಗವದ್ರೂಪೈಃ ಸಹೈವ ಸರಣಾತ್ ಸಹಸ್ರಮ್'***

ಇದೇ ರೀತಿ ಸಹಸ್ರನಾಮವೆಂದರೂ ಸಹಸ್ರನಾಮದಲ್ಲಿರುವ ಭಗವಂತನ ಅನಂತಾನಂತ ರೂಪಗಳಿದ್ದರೂ ಅವುಗಳ ನಾಮಗಳೊಂದಿಗೆ ಇರುವುದರಿಂದ ***'ಸಹಸ್ರ'*** ವೆನಿಸಿದೆ. ಆದ್ದರಿಂದ ಸಹಸ್ರವೆಂದರೆ ಅನಂತವೆಂದರ್ಥ.

ಅನಂತನಾಮವನ್ನು ಹೇಳಲು ನಮ್ಮಂತಹವರಿಗೆ ಸಾಧ್ಯವಿಲ್ಲವಾದ್ದರಿಂದ ಸಹಸ್ರವೆನ್ನಲಾಗಿದೆ.

**'ಅನಂತನಾಮವಚನೇ ತ್ವಶಕ್ತತ್ವಾತ್ ಸಹಸ್ರಕಮ್'**
**ನಾಮ್ನಾ ಸಹ ಸ್ಮೃತೇರೇವ ರೂಪಾಣಾಂ ವಾ ಸಹಸ್ರತಾ ।**
**ಸಹೈವ ಅನಂತರೂಪೈಸ್ತು ಸರಣೇನ ಸಹಸ್ರಕಮ್ ॥**

***ಜ್ವರಾದಿ ಪರಿಹಾರ :***

ಚರಕ ಸಂಹಿತೆಯಲ್ಲಿ ಇಲ್ಲಿ ಹೇಳಲಾಗಿರುವ ಔಷಧಿಗಳಿಂದ ಜ್ವರಾದಿ ಪರಿಹಾರವಾಗದಿದ್ದರೆ ವಿಷ್ಣು ಸಹಸ್ರನಾಮದಿಂದ ಸ್ತೋತ್ರ ಮಾಡಿದರೆ ಸರ್ವಸಾಂಸಾರಿಕ ರೋಗಗಳೆಲ್ಲ ಇಲ್ಲದಂತಾಗುವುವು.

***ವಿಷ್ಣುಂ ಸಹಸ್ರಮೂರ್ಧಾನಂ ಚರಾಚರಪತಿಂ ವಿಭುಮ್ ।***
***ಸ್ತುವನ್ನಾಮ ಸಹಸ್ರೇಣ ಜ್ವರಾನ್ ಸರ್ವಾನ್ ವ್ಯಪೋಹತಿ*** ॥ ಚರಕ-6/3/306

ಇದು ಬೃಹತೀಸಹಸ್ರಕ್ಕೂ ಅನ್ವಯುವಾಗುತ್ತದೆ. ವ್ಯಾಖ್ಯಾನ ವ್ಯಾಖ್ಯೇಯಗಳಿಗೆ ಏಕಾರ್ಥ ಪ್ರತಿಪಾದಕತ್ವ ಇರಬೇಕಲ್ಲವೆ?

***ಪೂರ್ವೇತಿಹಾಸ –***

ಇಂದ್ರದೇವನು ಲೋಕಕಲ್ಯಾಣಕ್ಕಾಗಿ ವೃತ್ರಾಸುರನನ್ನು ಕೊಂದು ಹಾಕಿದನು. ಇದು ಭಗವಂತನಿಗೆ ಪ್ರಿಯವಾದ್ದರಿಂದ ಧರ್ಮವೆನಿಸಿತು. ಇದೂ ಅಲ್ಲದೆ ಅಪರೋಕ್ಷಜ್ಞಾನಿಯಾದ ಇಂದ್ರದೇವನಿಗೆ ವೃತ್ರಾಸುರನನ್ನು ಕೊಂದಿದ್ದರಾಗಲೀ, ಅಹಲ್ಯೆಯನ್ನು ಬಲಾತ್ಕರಿಸಿದ್ದರಿಂದಾಗಲೀ ಅವನ ಕೂದಲಿಗೂ ಏನು ಆಗಲಿಲ್ಲ. – ***'ತಸ್ಯ ಲೋಮಾಪಿ ನ ಕ್ಷೀಯತೇ'*** ವೃತಾಸುರನನ್ನು ಕೊಂದ ಪುಣ್ಯದಿಂದ ಮಹಾನ್ ಎನಿಸಿದನು.

***'ಇಂದ್ರೋ ವೈವೃತ್ರಂ ಹತ್ವಾ ಮಹಾನಭವತ್'*** – ಐತರೇಯಾರಣ್ಯಕ.

ವೃತ್ರಹನನದಂತಹ ಕಾರ್ಯದಲ್ಲಿ ಶಕ್ತ್ಯಾದಿಗಳನ್ನು ನೀಡಿದ ಭಗವಂತನ ಪ್ರೀತಿಗಾಗಿ ***'ಮಹಾವ್ರತ'***ವೆಂಬ ಯಾಗ ಮಾಡಿದರು.

***'ಮಹಾಂತಂ ವಿಷ್ಣುಮುದ್ದಿಶ್ಯ ಕೃತಮಿತಿ ಮಹಾವ್ರತಂ'***

ಈ ಯಾಗದ ವೈಶಿಷ್ಟ್ಯವಾದರೂ ಹೀಗಿತ್ತು. ಭೃಗು ಋಷಿಗಳೇ ಅಧ್ವರ್ಯುಗಳು, ಹೋತೃ-ವಿಶ್ವಾಮಿತ್ರರು, ವಾಯುದೇವರೇ – ಉದ್ಗಾತೃವು.

ಬ್ರಹ್ಮದೇವರೆ ಬ್ರಹ್ಮನ ಸ್ಥಾನಾಪನ್ನರಾಗಿದ್ದರು. ಸದಸ್ಯನಾಗಿ ಶ್ರೀಮನ್ನಾರಾಯಣನೇ ಈಗಿದ್ದನು. ಇದು ಬ್ರಹ್ಮಾಂಡ ಪುರಾಣದಲ್ಲಿದೆ.

ಮಹಾವ್ರತಯಾಗವು ವಿಕೃತಿಯಾಗವೆನಿಸಿದ್ದು. ವಿಶ್ವಜಿದ್ಯಾಗ, ಚತುರ್ವಿಂಶಾದಿ ಯಾಗಗಳು ಇದಕ್ಕೆ ಪ್ರಕೃತಿಯೆನಿಸಿವೆ.

ಪ್ರತಿಯಾಗಕ್ಕೂ ಪ್ರಾತಃ ಸವನ, ಮಾಧ್ಯಂದಿನ ಸವನ, ಸಾಯಂ ಸವನವೆಂಬ ಮೂರು ಸವನಗಳಿರುತ್ತವೆ. ಅದರಂತೆ ಮಹಾವ್ರತ ಯಾಗಕ್ಕೂ ಭಗವಂತನನ್ನು ಪ್ರಶಂಸಿಸುವ ಶಸ್ತ್ರನಾಮಕ ಮಂತ್ರಗಳಿರುತ್ತವೆ. ಮಹಾವ್ರತದ ಪ್ರಾತಃ ಸವನದಲ್ಲಿ ಆಜ್ಯ ಶಸ್ತ್ರ, ಪ್ರಉಗಶಸ್ತ್ರವೆಂಬ ಎರಡು ಶಸ್ತ್ರಗಳಿವೆ. ಮಹಾವ್ರತದ ಮಾಧ್ಯಂದಿನ ಸವನದಲ್ಲಿಯೂ ಮರುತ್ವತೀಯ ಹಾಗೂ ನಿಷ್ಕೇವಲ್ಯವೆಂಬ ಎರಡು ಶಸ್ತ್ರಗಳು. ಇವುಗಳಲ್ಲಿ ಚತುವಿಂಶತಿ ಯಾಗದಲ್ಲಿ ಮರುತ್ವತೀಯ ಶಸ್ತ್ರವು ಶಂಸಿಸಲ್ಪಡುತ್ತದೆ. ನಿಷ್ಕೇವಲ್ಯ ಶಸ್ತ್ರವನ್ನೇ ಬೃಹತೀ ಸಹಸ್ರವೆಂದು ಕರೆಯಲಾಗಿದೆ. *'ತದಿದಾಸ ಭುವನೇಷು ಜ್ಯೇಷ್ಠಂ'* ಇತ್ಯಾದಿ ಮಂತ್ರಗಳಿಂದ ಪ್ರಶಂಸಿಸಲ್ಪಡುತ್ತದೆ. ಹಾಗಾದರೆ ಬೃಹತೀಸಹಸ್ರವೆಂದರೆ ಮಹಾವ್ರತದ ಮಾಧ್ಯಂದಿನ ಸವನದಲ್ಲಿ ಪ್ರಶಂಸಿಸಲ್ಪಡುವ ನಿಷ್ಕೇವಲ್ಯ ಶಸ್ತ್ರವೇ ಆಗಿರುತ್ತದೆ.

ಮಹಾವ್ರತದಲ್ಲಿ ಮಾಡಬೇಕಾದ ಕರ್ಮಗಳನ್ನು ಐತರೇಯಾರಣ್ಯಕ ನಿರೂಪಿಸುತ್ತದೆ. ಅರಣ್ಯಕವು ಐದು ಭಾಗಗಳನ್ನೊಳಗೊಂಡಿದ್ದು, ಒಂದೊಂದು ಅನೇಕ ಅಧ್ಯಾಯಗಳಿಂದಲೂ, ಒಂದೊಂದು ಅಧ್ಯಾಯವೂ ಅನೇಕ ಖಂಡಗಳಿಂದಲೂ ಕೂಡಿರುತ್ತವೆ. ಇವುಗಳಲ್ಲಿ ಎರಡನೆ ಹಾಗೂ ಮೂರನೇ ಪಂಚಿಕೆಯನ್ನೇ *'ಮಹೈತರೇಯೋಪನಿಷತ್'* ಎನ್ನಲಾಗಿದೆ. ಒಂದನೆಯ, ನಾಲ್ಕು- ಐದನೆಯ ಪಂಚಿಕೆಗಳು ಮಹಾವ್ರತ ಕರ್ಮಗಳನ್ನು ತಿಳಿಸುತ್ತವೆ.

***ಗರುಡಚಯನ –***

ಮಹಾವ್ರತ ಯಾಗದಲ್ಲಿ ಚಿತಿಯು ಗರುಡನ ಆಕಾರದಲ್ಲಿರಬೇಕೆಂದು ಗರುಡಚಯನವೆಂಬ ಗ್ರಂಥ ತಿಳಿಸಿದೆ. ಗರುಡಾಕಾರವಿರುವ ಚಿತಿಗೆ ಐದು ಭಾಗಗಳಿರುತ್ತವೆ. ಆತ್ಮಾ 2 ಶಿರಸ್ಸು 3 ದಕ್ಷಿಣ ಪಕ್ಷ 4 ಉತ್ತರ ಪಕ್ಷ 5, ಪುಚ್ಛವೆಂದು.

ಹೀಗೆ ಐದು ಭಾಗಗಳುಳ್ಳ ಚಿತಿಯಲ್ಲಿ ಸನ್ನಿಹಿತನಾಗಿರುವ ಶ್ರೀಕರ ರೂಪಿ ಭಗವಂತನ ಮಹಿಮೆಗಳನ್ನು ಬೃಹತೀಸಹಸ್ರ ಪ್ರತಿಪಾದಿಸುತ್ತದೆ. ಚಿತಿಯಲ್ಲಿರುವ ಐದು ಭಾಗಗಳಲ್ಲಿ ಅನಿರುದ್ಧಾದಿ ಪಂಚ ರೂಪಗಳು ಸನ್ನಿಹಿತವಾಗಿರುತ್ತವೆ.

ಬೃಹತೀಸಹಸ್ರವೂ ಸಹ ಪಾಗ್ಭಾಗ 2 ಗಾಯತ್ರ ತೃಚಾಶೀತಿ 3 ಬಾರ್ಹತ ತೃಚಾಶೀತಿ 4 ಔಷ್ಣಿಹ್ ತೃಚಾಶೀತಿ, 5 ಉತ್ತರಭಾಗವೆಂದು ಐದು ಭಾಗಗಳಿಂದ ಕೂಡಿರುತ್ತದೆ.

***ಬೃಹತೀ ಛಂದಸ್ಸು :***

ಶಾಸ್ತ್ರದಲ್ಲಿ ಗಾಯತ್ರೀ (24), ಉಷ್ಣಿಕ್ (28), ಅನುಷ್ಟುಪ್ (32), ಬೃಹತೀ (36), ಪಂಕ್ತಿ (4), ತ್ರಿಷ್ಟುಪ್ (44), ಜಗತೀ (48). ಹೀಗೆ ಪ್ರಧಾನವಾಗಿ ಏಳು ಛಂದಸ್ಸುಗಳಿವೆ ಎನ್ನಲಾಗಿದೆ. ಬೃಹತೀ ಸಹಸ್ರದಲ್ಲಿ 36 ಅಕ್ಷರಗಳಿರುವ ಸಾವಿರ ಛಂದಸ್ಸು ಋಗ್ವೇದದಲ್ಲಿಯೇ ಇರುವುದಿಲ್ಲ. ಹೀಗಿರುವಾಗ ಬಾರ್ಹತ ತೃಚಾಶೀತಿಯಲ್ಲಿ ಬೃಹತೀ ಛಂದಸ್ಸಿನ 240 ಮಂತ್ರಗಳಿವೆ ಎಂದು ಭ್ರವಿಸಬಾರದು. ಬೃಹತೀ ಸಹಸ್ರವಾದರೂ ಒಂದೆಡೆ ಇರುವ ಮಂತ್ರಕ್ಕಾಗಲೀ, ಮಂತ್ರದ ಭಾಗಕ್ಕಾಗಲೀ ಬೇರೊಂದು ಕಡೆ ಲಭಿಸುವ ಮಂತ್ರಗಳಿಂದ ಜೋಡಿಸಿ ಮಾಡಿರುವ ***'ವಿಹರಣ'*** ಸ್ವರೂಪದ್ದಾಗಿದೆ.

ಹೀಗೆ ತಿಷ್ಟುಪ್ ಮಂತ್ರಗಳು, ಗಾಯತ್ರೀ ಛಂದಸ್ಸಿನ ಮಂತ್ರಗಳು, ಉಷ್ಣಿಕ್ ಛಂದಸ್ಸಿನ ಮಂತ್ರಗಳನ್ನು ವಿಭಾಗಿಸಿ ಬೇರೆಡೆ ಹೇಳಿರುವ ಮಂತ್ರಗಳ ಅವಯವಗಳೊಂದಿಗೆ ಸೇರಿಸಿ, 36 ಅಕ್ಷರಗಳಿಗೆ ಒಂದು ಬೃಹತೀ ಎಂದು ತಿಳಿದು ***'ಏಷಸ್ತೋಮೊ'***ವೆಂಬಲ್ಲಿವರೆಗೆ, ಕೂಡಿಸಿದಾಗ 36 ಅಕ್ಷರಗಳ ಸಾವಿರ ಮಂತ್ರಗಳು ಸಂಪಾದಿತವಾಗುತ್ತವೆ. ಇದೇ ಬೃಹತೀಸಹಸ್ರ. ಪಾಂಘ್ರೀ ಆಚಾರ್ಯರು 36 ಅಕ್ಷರಕ್ಕೆ ಒಂದು ಬೃಹತೀ ಬರುವಂತೆ ಸಾವಿರ ಮಂತ್ರ ಸಂಪಾದಿಸಿದ್ದಾರೆ.

ಯಾವುದೋ ಛಂದಸ್ಸಿನ ಮಂತ್ರಗಳೊಂದಿಗೆ ಸೇರಿಸಿ ಮಾಡುವುದಾದರೆ ಬೃಹತೀ ಸಹಸ್ರವೇ ಏಕಾಗಬೇಕು? ಬೃಹತೀ ಛಂದಸ್ಸಿನ ಮುಖ್ಯಪ್ರಾಣನು ದೇವತೆಯಾಗಿರುವುದರಿಂದ ***'ವಾಯೌಮುಖ್ಯಧಿಯಾ'*** ಎಂಬಂತೆ ಬೃಹತೀ ಛಂದಸ್ಸಿನ ಮಂತ್ರಗಳನ್ನು ಸಂಪಾದಿಸಲಾಗಿದೆ.

ಬೃಹತೀಸಹಸ್ರವು ವಿಷ್ಣುಸಹಸ್ರನಾಮದಲ್ಲಿ ಹೇಳಿದ ವಿಶ್ವಾದಿ ಸಾವಿರ ಮೂರ್ತಿಗಳನ್ನು ವಿವರಿಸುತ್ತಾ ವ್ಯಾಖ್ಯಾನದಂತಿದೆ. ಇದರಿಂದಾಗಿ ***'ಬ್ರಹ್ಮ ವಿದ್ಯೆ'*** ಎನಿಸಿದ್ದು ಪ್ರತಿಮಂತ್ರ ಹೇಳುವಾಗಲೂ ಆದ್ಯಂತಗಳಲ್ಲಿ ಓಂಕಾರವನ್ನು ಸೇರಿಸಿ ಹೇಳಬೇಕು. ಅನ್ಯಥಾ ವಿಶರಣ ಸ್ರವಣ ದೋಷ ತಪ್ಪಿದ್ದಲ್ಲ.

ಬೃಹತೀ ಸಹಸ್ರ ಮಂತ್ರಗಳು ವಿಹರಣ ಕ್ರಮದಿಂದ ಜೋಡಿಸಿರುವುದರಿಂದ

ನಿರ್ದಿಷ್ಟ ಸ್ವರಗಳನ್ನು ಹಾಕಲು ಕಷ್ಟ ಸಾಧ್ಯ. ಪದ ಪಾಠಜ್ಞಾನ ಸರಿಯಾಗಿರಬೇಕು. ಇಲ್ಲಿರುವ ಮಂತ್ರಗಳು ಆರಣ್ಯಕದಲ್ಲಿರುವಂತಹವು. ಆರಣ್ಯಕ ಭಾಗವು ಸ್ವರರಹಿತವಾಗಿದ್ದು ದಂಡಾಕರವಾಗಿರುತ್ತವೆ. ಆದ್ದರಿಂದ ದಂಡಾಕಾರವಾಗಿ ಪಾರಾಯಣ ಮಾಡುತ್ತಾ ಹೋದರೆ ಪೂರ್ಣಫಲ ಬರುತ್ತದೆ. ಆದರೂ ಮಹಾಮೇಧಾವಿಗಳೂ, ಚತುರ್ವೇದ ಪಂಡಿತರೂ ಮಾಧ್ವಯ–ಸ್ಮಾರ್ತ್ಮರಿಗೂ ವೇದ ಕಲಿಸಿದ ಸಂಹಿತಾ ಪಾಠ, ಪದಪಾಠ, ಘನ ಪಾಠಗಳಲ್ಲಿ ಪರಿಣತರಾದ ಮಧ್ವರಾಯರು, ಶ್ರೀಪಾದರಾಜ ಮಠದ ಸುಧೀನಿಧಿಗಳ ಆದೇಶದಂತೆ ಸ್ವರವನ್ನು ಹಾಕಿದ್ದ ಸ್ವರವನ್ನು ಇಲ್ಲಿ ಅಳವಡಿಸಿ ಬರೆಯಲಾಗಿದೆ.

ಸ್ವರಜ್ಞಾನವಿರುವ ಪಂಡಿತರು ಸ್ವರ ಸಹಿತವಾಗಿಯೂ, ಸ್ವರಜ್ಞಾನರಹಿತರು ದಂಡಾಕಾರವಾಗಿಯಾದರೂ ಪಠಿಸಿ ಹರಿವಾಯುಗಳ ಪ್ರೀತಿಗೆ ಪಾತ್ರರಾಗಬೇಕು.

ಬೃಹತೀ ಸಹಸ್ರದಲ್ಲಿ ಪ್ರತಿಪಾದಿತವಾಗಿರುವ 72 ಸಾವಿರ ವರ್ಣಗತ ರೂಪಗಳನ್ನು ಪಾರಾಯಣದ ಮೂಲಕ ಧ್ಯಾನ ಮಾಡಿದರೆ ನೂರುವರ್ಷ ಹರಿಧ್ಯಾನ ಫಲ ಲಭಿಸುತ್ತದೆ.

***ಶತವರ್ಷ ಹರಿಧ್ಯಾನ ಫಲಮಾಪ್ನೋತಿ ಪೂರುಷಃ***

ಬೃಹತೀ ಛಂದಸ್ಸಿಗೆ ಅಭಿಮಾನಿ ದೇವತೆ ವಾಯುದೇವನಾದ್ದರಿಂದ ಈ ಛಂದಸ್ಸು ಇತರ ಛಂದಸ್ಸಿಗಿಂತ ಶ್ರೇಷ್ಠವೆಂದಾಯಿತು. ಬೃಹತಿ ಛಂದಸ್ಸು ಪ್ರಧಾನವಾದ್ದರಿಂದಲೇ ಜಗತ್ಯಾದಿ ಛಂದಸ್ಸಿಗಳಿಂದ ಜಗತೀಸಹಸ್ರಾದಿಗಳನ್ನು ಸಂಪಾದಿಸಿಲ್ಲ. ***'ಪ್ರಧಾನತ್ವಾತ್ ಬೃಹತ್ಯಾಸ್ತು ಜಗತ್ಯಾದ್ಯಂ ನ ಯುಜ್ಯತೇ'***.

ಈ ತದಿದಸೇತ್ಯಾದಿ ಬೃಹತೀ ಸಹಸ್ರದಲ್ಲಿರುವ ಹಿಂದೆ ಹೇಳಿದ ಪಂಚವಿಧದಲ್ಲಿ ಪೂರ್ವಭಾಗಕ್ಕೆ ಮತ್ಸ್ಯ, ಗಾಯತ್ರೀತ್ಯಚಾಶೀತಿಗೆ ಕೂರ್ಮ, ಬಾರ್ಹತೀತ್ಯಚಾಶೀತಿ ವರಾಹ, ಔಷ್ಣಿಹ್‌ತ್ಯಚಾಶೀತಿಯಿಂದ ನೃಸಿಂಹ, ಉತ್ತರಭಾಗದಿಂದ ವಾಮನ ಪ್ರತಿಪಾದ್ಯನು.

ಪೂರ್ವಭಾಗದಲ್ಲಿಯೂ ಪುನಃ ಐದು ಭಾಗಗಳಿವೆ. ಶಿರಸ್ಸು, ದಕ್ಷಿಣ ಪಕ್ಷ, ಉತ್ತರ ಪಕ್ಷ, ಪುಚ್ಛ – ಆತ್ಮಾವೆಂದು. ಇವುಗಳಲ್ಲಿ ಶ್ಯೇನಾಕಾರವಾಗಿ ಇಟ್ಟಿಗೆಗಳಿಂದ ರಚಿಸಿದ ಚಿತಿಯಲ್ಲಿರುವ ಗರುಡನ ಮಧ್ಯ ದೇಹ ಪ್ರತಿಪಾದ್ಯವಾದ ಅಂಶವೇ 'ತದಿದಾಸಂ' ಎಂಬಲ್ಲಿಂದಾರಂಭಿಸಿ 50 ಋಕ್ ಪ್ರತಿಪಾದ್ಯವಾದದ್ದು 'ಆತ್ಮಾ' ಎನ್ನಲಾಗಿದೆ. ನಂತರದ 101 ಋಕ್ಕುಗಳಿಂದ ದಕ್ಷಿಣಬಾಹು ಪ್ರತಿಪಾದಕ

ಬಲರೆಕ್ಕೆಯು ಪ್ರತಿಪಾದ್ಯವು. ನಂತರದ 202 ಋಕ್ ಪ್ರತಿಪಾದ್ಯವಾದ ಸುಪರ್ಣನ ವಾಮಬಾಹು ಪ್ರತಿಪಾದ್ಯವಾದ್ದರಿಂದ ಉತ್ತರಪಕ್ಷವೆನಿಸಿದೆ. ನಂತರದ ಋಕ್ಕುಗಳು ಸುಪರ್ಣನ ಪಾದ ಪ್ರತಿಪಾದಕವಾದ್ದರಿಂದ ಪುಚ್ಛವೆನಿಸಿದೆ.

ಇವುಗಳಲ್ಲಿ ಪುಚ್ಛಭಾಗವು ಮತ್ಸ್ಯಾತ್ಮಕ ನಾರಾಯಣಾನಿರುದ್ಧ-ವಾಸುದೇವನನ್ನು, ಉತ್ತರಪಕ್ಷವು ಮತ್ಸ್ಯಾತ್ಮಕ ನಾರಾಯಣಾನಿರುದ್ಧ ಸಂಕರ್ಷಣನನ್ನೂ, ದಕ್ಷಿಣ ಪಕ್ಷವು ಮತ್ಸ್ಯಾತ್ಮಕ ನಾರಾಯಣಾನಿರುದ್ಧ ಪ್ರದ್ಯುಮ್ನನನ್ನೂ, ಶಿರೋಭಾಗವು ಮತ್ಸ್ಯಾತ್ಮಕ ನಾರಾಯಣನಿರುದ್ಧಾನಿರುದ್ಧನನ್ನು ತಿಳಿಸುತ್ತದೆ.

ಬೃಹತೀಸಹಸ್ರವು ಭಗವಂತನನ್ನು ಪರಮ ಮುಖ್ಯವಾಗಿ ಪ್ರತಿಪಾದಿಸಿದರೆ ವಾಯುದೇವನನ್ನು ಮುಖ್ಯವಾಗಿ ಪ್ರತಿಪಾದಿಸುತ್ತದೆ. ಹರಿ-ವಾಯುಗಳಿಗೆ ಅತ್ಯಂತ ಪ್ರೀತಿಕರವಿದು.

ಬೃಹತೀಸಹಸ್ರವೆಲ್ಲವೂ ನಾರಾಯಣನಿಗೆ ***'ಅನ್ನ'***ವೆನಿಸಿದೆ.

ಇಲ್ಲಿ ಹೇಳಿರುವ ಮಹಿಮೆಗಳನ್ನು ಕೊಂಡಾಡಿದಾಗ ಪ್ರಸನ್ನನಾಗುವನು. ವಾಯುದೇವನಿಗೂ ಇದು ಅನ್ನದಷ್ಟೇ ಪ್ರೀತಿಕರವು.

ಹಿಂದೆ ವೃತ್ರನನ್ನು ಸಂಹರಿಸಿದ ಇಂದ್ರದೇವನು ಮಹಾವ್ರತಯಾಗ ಮಾಡಿದಾಗ ವಿಶ್ವಾಮಿತ್ರರು ಬೃಹತೀಸಹಸ್ರವನ್ನು ಪಠಿಸುತ್ತಾ ಭಗವಂತನನ್ನು ಸ್ಮರಿಸಿದನು. ಕೂಡಲೇ ಭಗವಂತನು ವಾಯುವಿನೊಂದಿಗೆ ಬಂದು ಇಂದ್ರನಲ್ಲಿ ಆವಿಷ್ಟನಾದನು ಹಾಗೂ ***'ಬೃಹತೀ ಸಹಸ್ರ ಪಠಿಸು'*** ಎಂದನು. ವಿಶ್ವಾಮಿತ್ರರು ***'ಇದು ನಿನಗೆ ಅತ್ಯಂತ ಪ್ರೀತಿಕರವಾದ ಅನ್ನವು'*** ಎಂದು ಪಠಿಸಿದನು. ಇದರಿಂದಾಗಿ ಭಗವಂತ ಪ್ರೀತನಾಗಿ ನೀನು, ಪ್ರಿಯವಾದ ಸ್ಥಾನಗಳಸುವಿ, ಎಂದು ಹೇಳಿ, ಪುನಃ ಪಠಿಸಲು ಹೇಳಿದನು.

ಎರಡನೇ ಬಾರಿಯೂ ಬೃಹತೀಸಹಸ್ರ ಪಠಿಸಿದಾಗ ತತ್ಫಲವಾಗಿ ***'ಪ್ರಿಯಧಾಮ'***ವನ್ನೇ ನೀಡಿ, ಪುನಃ ಮೂರನೇ ಬಾರಿಯು ಪಠಿಸಿದಾಗ ಇಂದ್ರಾಂತರ್ಯಾಮಿ ಭಗವಂತನು ಅತೀಪ್ರೀತನಾಗಿ ***'ಪ್ರಿಯಧಾಮವನ್ನೇ ಅತಿಶಯವಾಗಿ ನೀಡಿದ್ದೇನೆ'*** ಎಂದನು. ಇದರಿಂದಾಗಿ -

1) ಪ್ರಥಮವಾಗಿ ಪಠಿಸಿದ ವಿಶ್ವಾಮಿತ್ರನಿಗೆ ತನ್ನ ಸಾಲೋಕ್ಯವನ್ನೂ

2) ದ್ವಿತೀಯ ಬಾರಿ ಪಠಿಸಿದ ವಿಶ್ವಾಮಿತ್ರನಿಗೆ ತನ್ನ ಸಾಮೀಪ್ಯವನ್ನೂ

3) ತೃತೀಯ ಬಾರಿ ಪಠಿಸಿದ ವಿಶ್ವಾಮಿತ್ರನಿಗೆ ತನ್ನ ಅಂತಃಪುರ ಪ್ರವೇಶವನ್ನೂ ನೀಡಿದನು.

ಹೀಗೆ ವೈಕುಂಠಾದಿ ಮುಕ್ತ ಲೋಕ, ನಾರಾಯಣಪುರ, ಅಂತಃಪುರ ಪ್ರಾಪ್ತಿಯನ್ನೂ ದೊರೆಕಿಸಿ ಕೊಟ್ಟ ಬೃಹತಿಸಹಸ್ರವು ಭಗವಂತನಿಗೆ ಅತ್ಯಂತ ಪ್ರಿಯವೆಂದು ಹೇಳಿದಂತಾಯಿತು.

ಬೃಹತೀ ಸಹಸ್ರವು ಜಗತ್ತನ್ನು ಸೃಷ್ಟಿಸುವುದರಿಂದ *'ಉಕ್ಥ'*ನೆನಿಸಿದ ಭಗವಂತನ ಪ್ರತಿಮೆಯೆನಿಸಿ ಉಕ್ಥನಾಮಕವಾಗಿದೆ.

ಇದು ಪ್ರಾಗ್ಭಾಗಾದಿ ಐದು ಭೇದಗಳಿಂದ ಭಿನ್ನವಾಗಿದ್ದು ವಾಸುದೇವಾದಿ ಪಂಚರೂಪಗಳು ಸನ್ನಿಹಿತವಾಗಿವೆ. ಈ ಭಾಗಗಳಿಂದ ಕೂಡಿದ *'ಉಕ್ಥ'*ದ ಮಧ್ಯಭಾಗದಲ್ಲಿರುವ ಸಂಕರ್ಷಣನ ಆವೇಶವಿರುವುದರಿಂದಲೇ ಶೇಷದೇವನು ಐಳುಕೋಟಿ ಯೋಜನ ವಿಸ್ತಾರವಾದ ಭೂಮಿಯನ್ನು ಸಾಸುವೆಯಂತೆ ಹೊತ್ತಿದ್ದಾನೆ. ಪ್ರದ್ಯುಮ್ನನ ಸನ್ನಿಧಾನದಿಂದಾಗಿ ಮನ್ಮಥನು ಪ್ರದ್ಯುಮ್ನನಾಮಕನಾಗಿ ವೈಭವದಿಂದ ಇರುವನು. ಇದೇ ರೀತಿ ಐದನೇ ಭಾಗದಲ್ಲಿರುವ ಅನಿರುದ್ಧನ ಆವೇಶ ಬಲದಿಂದಾಗಿ ಕಾಮಪುತ್ರ ಅನಿರುದ್ಧನು *'ಅನಿರುದ್ಧ'*ನಾಮಕನಾಗಿದ್ದಾನೆ.

ಬೃಹತೀ ಛಂದಸ್ಸಿನ ಸಾವಿರ ಋಕ್ಕುಗಳಾದರೆ ಪ್ರತಿಭಾಗದಲ್ಲಿ 200 ಮಂತ್ರಗಳಂತೆ ಐದು ಭಾಗದಲ್ಲಿ ನಾರಾಯಣಾದಿ ಐದು ರೂಪಗಳು ಸನ್ನಿಹಿತವಾಗಿರುತ್ತವೆ.

ಬೇರೆ ಛಂದಸ್ಸಿನ ಋಕ್‌ಗಳಿಂದ ಬೃಹತೀ ಸಂಪಾದಿಸಿದರೆ ಎಷ್ಟೆಷ್ಟು ರೂಪಗಳು ಲಭಿಸುತ್ತವೆ ಎಂದು ನೋಡೋಣ.

ಗಾಯತ್ರೀ ಛಂದಸ್ಸು - ತ್ರಿಜಾಶೀತಿ - ಅಕ್ಷರಗಳು

24 ಅಕ್ಷರ - 240 X 24 = 5760 ರೂಪಗಳು

ಬೃಹತೀ ಛಂದಸ್ಸು

36 ಅಕ್ಷರ - 240 X 36 = 8680 ರೂಪಗಳು

ಉಷ್ಣಿಕ್ -

28 ಅಕ್ಷರ - 240 X 28 = 6720 ರೂಪಗಳು

21,120 ರೂಪಗಳು

ಇದಕ್ಕೆ ಪ್ರಾಗ್ಭಾಗ 200 ಬೃಹತೀ ಹಾಗೂ ಹತ್ತು ಗಾಯತ್ರೀ ಹಾಗೂ ಕಡೆ ಭಾಗದ 200 ಮಂತ್ರ ಹಾಗೂ ಹತ್ತು ಗಾಯತ್ರೀ ಋಕ್ಕುಗಳನ್ನು ಸೇರಿಸಿದರೆ 400 ಬೃಹತಿಗೆ 14,400 (400 36) 20 X24 = 480 = 14,880 ಮಂತ್ರಗಳಾದವು. ಹಿಂದಿನ 21,120 + 14,880 = 36,000. ಹೀಗೆ 36,000 ಅಕ್ಷರಗಳ ಬೃಹತೀವೇರ್ಪಡುತ್ತದೆ.

ಅಕಾರವು ಸರ್ವವಾಗಾತ್ಮಕವಾಗಿದ್ದು ಬೃಹತೀಸಹಸ್ರವು ಅಕಾರದ ವ್ಯಾಖ್ಯಾನವಾಗಿದೆ.

ಭಗವಂತನು 36 ಸಾವಿರ ನಾಡಿಗಳಲ್ಲಿ ಶ್ರೀ ಭೂ ಸಹಿತನಾಗಿ ವಿಹಾರ ಮಾಡುವನು. ಕಾಲುಗಳಲ್ಲಿ ಹನ್ನೆರಡು ಸಾವಿರ ನಾಡಿಗಳು, ಮಧ್ಯದೇಹದಲ್ಲಿ 14ಸಾವಿರ, ತೋಳುಗಳಿಗೆ 4 ಸಾವಿರ, ಶಿರಸ್ಸಿನಲ್ಲಿ 6 ಸಾವಿರ ನಾಡಿಗಳಿವೆ. ಒಟ್ಟು 36 ಸಾವಿರ ನಾಡಿಗಳು. 36 ಸಾವಿರ ನಾಡಿಗಳಲ್ಲಿರುವ ಭಗವಂತ 36 ಸಾವಿರ ರೂಪಗಳನ್ನು ಚಿಂತಿಸಿದವನಿಗೆ ಪ್ರತಿದಿನ ದಂಪತಿಗಳನ್ನು ಅರ್ಚಿಸಿದ ಫಲಕ್ಕೆ ಭಾಗಿಯಾಗನವು. (ಹ.ಕ. 12/4)

ಬೃಹತೀ ಸಹಸ್ರ ಪ್ರತಿಪಾದ್ಯ 72 ಸಾವಿರ ರೂಪಗಳಿಗೆ ಕೇಶವಾದಿ 24 ರೂಪಗಳನ್ನು ಸೇರಿಸಿದರೆ 34, 56000 ರೂಪಗಳಾಗುತ್ತವೆ.

***ಬೃಹತೀಪ್ರತಿಪಾದ್ಯ ಶ್ರೀಕರಮೂರ್ತಿ –***

ಬೃಹತೀ ಸಹಸ್ರ ಪ್ರತಿಪಾದ್ಯ ಶ್ರೀಶ್ರೀಕರಮೂರ್ತಿಗೆ ಎಂಟು ಕೈಗಳಿವೆ. ಅವುಗಳಲ್ಲಿ ಮೇಲಿನ ಎರಡು ಕೈಗಳಲ್ಲಿ ಸೂರ್ಯ–ಚಂದ್ರರನ್ನು, ಅದರ ಕೆಳಗಿನ ಕೈಗಳಲ್ಲಿ ಚಕ್ರ–ಶಂಖಗಳನ್ನೂ, ಅದರ ಕೆಳಗಿರುವ ಎರಡೂ ಕೈಗಳಲ್ಲಿ ಶಂಖನಿಧಿ ಪದ್ಮನಿಧಿಗಳನ್ನು ಧರಿಸಿರುವನು. ಕೆಳಗಿರುವ ಎರಡು ಕೈಗಳಲ್ಲಿ ಸಂಪತ್ತನ್ನು ಸುರಿಸುತ್ತಿರುವನು. ಗರುಡನ ಮೇಲೆ ಕೂತಿರುವ ಶ್ರೀಕರಮೂರ್ತಿಯು ಎಡ ತೊಡೆಯಲ್ಲಿ ಲಕ್ಷ್ಮೀದೇವಿಯನ್ನು ಕೂಡಿಸಿ ಕೊಂಡಿರುವನು.

***ಆದಿತ್ಯಚಂದ್ರಾವಪಿ ಶಂಖಚಕ್ರೌ ಶಂಖಪ್ರಸೂನಾಖ್ಯ ನಿಧೀ ದಧಾನಃ । ಚಿಂತ್ಯಃಕರಾಭ್ಯಾಂ ವಸು ತರ್ಪಯನ್ನಃ ಸ್ವಾಂಕಸ್ಥ ಲಕ್ಷ್ಮೀಃ ಗರುಡಾಂಸ ಸಂಸ್ಥಃ ।***

ಈ ಧ್ಯಾನ ಶ್ಲೋಕವಾದರೂ ಮೇಲಿನ ಅರ್ಥವನ್ನೇ ವಿವರಿಸುತ್ತದೆ.

ಇಂತಹ ಬೃಹತೀ ಸಹಸ್ರವನ್ನು ಒಂದು ಬಾರಿ ಪಾರಾಯಣ ಮಾಡಿದರೆ ಒಂಭತ್ತು ಕೋಟಿ ಮಂತ್ರ ಜಪ ಮಾಡಿದ ಫಲ ಬರುತ್ತದೆ.

***ನವಭಿಃ ಕೋಟಿಭಿಃ ಮಂತ್ರೈಃ ಯತ್ಫಲಂ ತತ್ಫಲಂ ಲಭತೇ***

ವಿಷ್ಣುಸಹಸ್ರನಾಮವನ್ನು ಪ್ರತಿದಿನ ಪಠಿಸುವವನ ಸಾವಿರ ಅಪರಾಧಗಳನ್ನು ಭಗವಂತನು ಕ್ಷಮಿಸುವನೆಂದು ಗಾರುಡ ಹೇಳಿದೆ.

***'ವಿಷ್ಣೋಃ ಸಹಸ್ರನಾಮಂ ತು ಯೋ ವಾ ಪಠತಿ ನಿತ್ಯಶಃ ।***
***ಪಾರ್ವಾಯರಾಧನಾಪ್ತಂ ಸಹತೇ ವಿಷ್ಣುರವ್ಯಯಃ ।***

ಇಂತಹ ಮಹಿಮೋಪೇತ ಸಹಸ್ರನಾಮಕ್ಕೆ ವ್ಯಾಖ್ಯಾನ ರೂಪವಾದದ್ದು **ಬೃಹತೀಸಹಸ್ರ**. ಇದರಿಂದ ಸ್ತುತಿಸಿದರೆ ಭಗವಂತನ ಅನಂತಾನಂತ ರೂಪಗಳನ್ನು ಸ್ತೋತ್ರ ಮಾಡಿದಂತಾಗಿ ಭಗವಂತನು ಶೀಘ್ರವಾಗಿ ಪ್ರಸನ್ನನಾಗುವನು.

## ಮೂರನೇ ಆವೃತ್ತಿ

ಪ್ರಸ್ತುತ ಬೃಹತೀಸಹಸ್ರವು ಮೂರನೇ ಆವೃತ್ತಿ ಕಂಡಿರುವುದು **ಶ್ರೀಕರಮೂರ್ತಿಯ ಅನುಗ್ರಹ ವಿಶೇಷ**. ಪ್ರತಿದಿವಸದಲ್ಲಿಯೂ ಇದರ ಹೋಮ-ಪಾರಾಯಣಾದಿಗಳು -ಪ್ರವಚನಗಳು ಹೆಚ್ಚೆಚ್ಚು ನಡೆಯುತ್ತಿವೆ. ಪವಮಾನ ಹೋಮಾದಿಗಳು ಪ್ರಸಿದ್ಧವಾಗಿರುವಂತೆ ಬೃಹತೀ ಸಹಸ್ರವು ಮನೆ ಮನೆಗೂ ಮುಟ್ಟಿ ಈ ಹೋಮ ಮಾಡಲು ಅತ್ಯುತ್ಕಟೇಚ್ಛೆ ತೋರಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಚತುರ್ವೇದಿ ಸೇವಾ ಟ್ರಸ್ಟ್ ಮೂಲ ಬೃಹತೀ ಸಹಸ್ರವನ್ನು ಪುನಃ ಮುದ್ರಣ ಮಾಡಿ, ಸಜ್ಜನರ ಆಶೆಯನ್ನು ಪೂರೈಸುತ್ತಿರುವುದು ಸಂತಸದ ವಿಷಯ.

ಈ ಬೃಹತೀ ಸಹಸ್ರವು ಬೃಹತೀ ಸಹಸ್ರದ ಸಾವಿರ ಮಂತ್ರಗಳು, ಹೋಮ ಮಾಡುವ ಕ್ರಮಗಳು - ಕಲಶ ಸ್ಥಾಪನೆ ಕ್ರಮ - ಪೂರ್ವಾಂಗ ಮತ್ತು ಉತ್ತರಾಂಗ ಸಹಿತ ಅಗ್ನಿಮುಖವನ್ನೂ ಒಳಗೊಂಡಿದ್ದು ಆರಂಭ ಪುರೋಹಿತರಿಗೆ ಉತ್ತಮ ಕೈಪಿಡಿಯಾಗಿದೆ.

ಶ್ರೀಶ್ರೀ ಪೇಜಾವರ ಮಠದ ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರು ತಮ್ಮ ಗುರುತರವಾದ ಕಾರ್ಯ ಗೌರವದಲ್ಲಿಯೂ ಇದನ್ನು ಅವಲೋಕಿಸಿ ಸುಂದರವಾದ ಅನುಗ್ರಹ ಕವಚ ತೊಡಿಸಿ ಮತ್ತಷ್ಟು ಗಟ್ಟಿ ಮಾಡಿದ್ದಾರೆ.

ಈ ಶತಮಾನದ ವಯೋವೃದ್ಧರೂ, ಜ್ಞಾನಿ ಶ್ರೇಷ್ಠರೂ, ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನದಾನ-ವಿದ್ಯಾದಾನ ಮಾಡಿ ಹೊಸ ಇತಿಹಾಸವನ್ನೇ ಸೃಷ್ಟಿಸಿದವರು. 31 ಸುಧಾಮಂಗಳ ಮಾಡಿ ಮುಗಿಸಿದ ಶ್ರೀಗಳವರು ಶ್ರೀಪಾದರಾಜರಂತೆ 40 ಸುಧಾಮಂಗಳ ಮಾಡುವಂತಾಗಲಿ. ಅವರ ಕೃಪಾದೃಷ್ಟಿ ನಮ್ಮ ಮೇಲೆ ನಿರಂತರವಿರಲಿ. ಜನ್ಮ ಜನ್ಮದಲ್ಲಿಯೂ ಶ್ರೀಗಳವರು ನಮಗೆ ತತ್ತ್ವೋಪದೇಶಕರಾಗಿ ಬರಲಿ.

**ಏಕತ್ರಿಂಶತ್‌ಸುವಾರಂ ತು ಯೋಽದಾತ್ ಟೀಕಾಮೃತಂ ಪರಮ್ ।**
**ತಂ ವಂದೇ ವಿಶ್ವತೀರ್ಥಾರ್ಯಂ ಮಧ್ವಶಾಸ್ತ್ರಾರ್ಥವಿತ್ತಯೇ**

ಎರಡನೆಯದಾಗಿ ಸುಂದರ ಅನುಗ್ರಹವನ್ನು ಅನುಗ್ರಹಿಸಿದ ಶ್ರೀ ಶ್ರೀ ಪಾದರಾಜ ಮಠಾಧೀಶರಾದ ಶ್ರೀ ಶ್ರೀ 108 ಶ್ರೀ ವಿಜ್ಞಾನನಿಧಿ ಶ್ರೀಪಾದಂಗಳವರು ಗ್ರಂಥವನ್ನು ಪ್ರಶಂಸಿಸುತ್ತಾ ಆಶೀರ್ವಚನವಿತ್ತಿದ್ದಾರೆ. ಇವರಿಗೆ ನನ್ನ ಭಕ್ತಾದರಪೂರ್ವಕವಾಗಿ ಪ್ರಣಾಮಗಳು.

ಈ ಬೃಹತೀ ಗ್ರಂಥ ಪ್ರಕಟಣೆಗೆ ಸಹಾಯ ಮಾಡಿದ ಎಸ್.ಆರ್.ಜಿ. ಎಂದೇ ಪ್ರಸಿದ್ಧರಾದ ಶ್ರೀಮಾನ್ ಗೋಪಾಲಕೃಷ್ಣರಾಯರು. ಜೀವನದಲ್ಲಿ ಶಿಸ್ತಿನ ಸಿಪಾಯಿಯಾದ ಇವರ ಜೀವನ ಎಲ್ಲರಿಗೂ ಆದರ್ಶಪ್ರಾಯವಾಗಿದೆ.

ಶ್ರೀಮದಾಚಾರ್ಯರಲ್ಲಿ ಮಹಾಗೌರವ ಹೊಂದಿರುವ ಇವರು ಮಧ್ವಾಚಾರ್ಯರ ಗ್ರಂಥಗಳನ್ನು ಸಂಕೇತಿ ಸುಬ್ಬರಾಯರು ಹಾಗೂ ವ್ಯಾಸರಾಜಮಠದ ತುಮಕೂರಿನ ಶಾಖೆಯ ಸೇವೆಯಲ್ಲಿ ತಮ್ಮನ್ನೇ ಅರ್ಪಿಸಿಕೊಂಡಿದ್ದ ರಾಮಮೂರ್ತ್ಯಾಚಾರ್ಯರ ಶಿಷ್ಯತ್ವ ವಹಿಸಿ ಅನೇಕ ಶಾಸ್ತ್ರಗಳನ್ನು ಅಧ್ಯಯನ ಮಾಡಿರುವರು.

ಇವರಲ್ಲದೆ ತುಮಕೂರಿನ ಸಿದ್ಧಗಂಗಾ ಕಾಲೇಜಿನಲ್ಲಿ ತರ್ಕಶಾಸ್ತ್ರ ಅಧ್ಯಾಪಕರಾಗಿದ್ದ ಶ್ರೀ ವಿದ್ವಾನ್ ಬಾಟ್ನಿ ರಾಮಚಂದ್ರಾಚಾರ್ಯರಲ್ಲಿಯೂ ಬ್ರಹ್ಮಸೂತ್ರ ಭಾಷ್ಯವೇ ಮೊದಲಾದ ಗ್ರಂಥಗಳನ್ನು ಅಧ್ಯಯನ ಮಾಡಿರುವರು.

ಯಾವುದೇ ಗ್ರಂಥವನ್ನು ಲಿಪಿಬದ್ಧಗೊಳಿಸಿ ಬರೆದಿಡುವುದೂ ಸಹ ಇವರ ಇನ್ನೊಂದು ಹವ್ಯಾಸ. ಮುತ್ತಿನಂತಹ ಅಕ್ಷರಗಳಲ್ಲಿರುವ ಗ್ರಂಥಗಳನ್ನು ಈಗಲೂ ಅವರ ಮನೆಯಲ್ಲಿ ನೋಡಬಹುದು. ಇವರ ಶಾಸ್ತ್ರ ಪಾಂಡಿತ್ಯ ನೋಡಿದ ಶ್ರೀ ವಿದ್ಯಾಮಾನ್ಯ ಗುರುಗಳು ಹಾಗೂ ಪೇಜಾವರ ವಿಶ್ವೇಶತೀರ್ಥರು ಇನ್ನು ಮುಂದೆ ಪಾಠಪ್ರವಚನ ಮಾಡಬಹುದೆಂದು ಅನುಗ್ರಹಿಸಿದರು. ಅಂದಿನಿಂದ ಪಾಠಪ್ರವಚನದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

89 ವರ್ಷದ ವಯೋವೃದ್ಧರೂ, ಜ್ಞಾನವೃದ್ಧರೂ ಆಗಿರುವ **ಎಸ್. ಆರ್. ಗೋಪಾಲಕೃಷ್ಣ** ಇವರು **ಬೃಹತೀ ಸಹಸ್ರ** ಪುಸ್ತಕ ಪ್ರಕಟನೆಗೆ ಸಹಾಯ ಮಾಡುತ್ತಿರುವುದು ಅವರ ಔದಾರ್ಯಕ್ಕೆ ಹಿಡಿದ ಕನ್ನಡಿ. ಇವರ ಪುತ್ರರಾದ ಎಸ್. ಜಿ. ರಾಘವೇಂದ್ರ ಇವರು ಸಹ ಧರ್ಮದಲ್ಲಿ ಆಸಕ್ತರಾಗಿದ್ದು ತಂದೆಯೊಂದಿಗೆ ತಾವೂ ಕೈಜೋಡಿಸಿ ಈ ಗ್ರಂಥವನ್ನು ಸರ್ವಾಂಗ ಸುಂದರವನ್ನಾಗಿಸಿದ್ದಾರೆ. ಇವರಿಗೆ ಚತುರ್ವೇದಿ ಸಂಸ್ಥೆಯು ಕೃತಜ್ಞತೆಗಳನ್ನು ಅರ್ಪಿಸುತ್ತಾ ಆಯುರಾರೋಗ್ಯಾದಿಗಳನ್ನು ನೀಡಲು ಭಗವಂತನನ್ನು ಪ್ರಾರ್ಥಿಸುತ್ತದೆ.

ಈ ಬೃಹತೀ ಸಹಸ್ರವನ್ನು ಸುಂದರವಾಗಿ ಅಕ್ಷರಜೋಡಣೆ ಮಾಡಿದ ಮಹಾಲಕ್ಷ್ಮೀಲೇಔಟ್‌ನ ಎಸ್. ಎನ್. ರಮೇಶ್‌ರವರಿಗೂ, ಸಕಾಲಕ್ಕೆ ಮುದ್ರಿಸಿಕೊಟ್ಟ ಹರಿ ಓಂ ಪ್ರಿಂಟರ್‌ನ ಮಾಲೀಕರಾದ ಶ್ರೀಯುತ ಪಂಚಾಕ್ಷರಿಯವರಿಗೂ, ಕೃತಜ್ಞತೆಗಳು.

ಇತಿ ಸಜ್ಜನ ವಿಧೇಯ

**ಡಾ|| ಚತುರ್ವೇದಿ ಎಸ್. ವೇದವ್ಯಾಸಾಚಾರ್ಯ**

ಶ್ರೀ ಹರಿಃ ಓಂ

ಶ್ರೀಹನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಶ್ರೀಕರಾಯ ನಮಃ ।

ಶ್ರೀ ಆನಂದತೀರ್ಥಗುರುಭ್ಯೋ ನಮಃ

ಶ್ರೀಗುರುಭ್ಯೋ ನಮಃ

# ಅಥ ಬೃಹತೀಸಹಸ್ರ ಹೋಮವಿಧಿಃ

### ಹರಿಗುರುಪ್ರಾರ್ಥನಾ

ಓಂ ಶ್ರೀ ಗುರುಭ್ಯೋ ನಮಃ । ಪರಮಗುರುಭ್ಯೋ ನಮಃ । ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ ॥

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥

ಯೋ ವಿಪ್ರಲಂಭವಿಪರೀತಮತಿಪ್ರಭೂತ-
ವಾದಾನ್ ನಿರಸ್ಯ ಕೃತವಾನ್ ಭುವಿ ತತ್ವವಾದಮ್ ।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಂ
ಆನಂದತೀರ್ಥಮುನಿವರ್ಯಮಹಂ ನಮಾಮಿ ॥

